# ಕೊರವಂಜಿ

ಜನವರಿ ೧೯೪೩



ಸಂಪಾದಕರು :
ಶ್ರೀ. ರಾ. ಶಿ.

ಸಲಹೆಗಾರರು :
ಶ್ರೀ ನಾ. ಕಸ್ತೂರಿ

ಚಿತ್ರಕಾರರು :
ಶ್ರೀ. ಆರ್. ಕೆ. ಲಕ್ಷ್ಮಣ್



ಬಿಡಿ ಪತ್ರಿಕೆ
ಎರಡಾಣೆ

ನಗೆಯ
ಮಾಸ

# ಕೊ ರ ವಂ ಜಿ

ಕೊರವಂಜಿಯು ಪ್ರತಿ ತಿಂಗಳಲ್ಲಿಯೂ ಹೊರಬೀಳುವುದು.

ತಿಳಿ ಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನು ದ್ವೇಷಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಸಂಪಾದಕೀಯ ಪತ್ರ ವ್ಯವಹಾರಗಳನ್ನು ಸಂಪಾದಕರು, ನಂ. ೧, ವೆಂಕಟ ರಂಗೈಯ್ಯಂಗಾರ್ ರಸ್ತೆ, ಮಲ್ಲೇಶ್ವರ, ಬೆಂಗಳೂರಿನಲ್ಲಿ ನಡೆಸಬೇಕು.

ವ್ಯವಸ್ಥಾಪಕರಲ್ಲಿ ಮಿಕ್ಕ ವಿಷಯಗಳನ್ನು ಪ್ರಸ್ತಾಪಿಸಬೇಕು.

ವ್ಯವಸ್ಥಾಪಕರು,
ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ರೂ. 2-0-0** **ಬಿಡಿ ಪ್ರತಿ 0-2-0**

---

## ವಿಷಯಾನುಕ್ರಮಣಿಕೆ


| ವಿಷಯ | ಪುಟ |
|---|---|
| ೧. ಕುಹಕಿಡಿಗಳು .... .... .... | ೩ |
| ೨. ಹುರಿಗಾಳು .... .... .... | ೫ |
| ೩. ಅವಿವಾಹಿತರಿಗೊಂದು ಎಚ್ಚರಿಕೆ .... .... | ೭ |
| ೪. ಕನ್ನಡ ಚಿತ್ರೋದ್ಧಾರ .... .... .... | ೯ |
| ೫. ಹಾಸ್ಟಲ್ ರಂಗಪ್ಪನ ದಶಾವತಾರ .... .... | ೧೩ |
| ೬. ಸಿಲ್ಕ್ ಸೀರೆ .... .... .... | ೧೫ |
| ೭. ಜೇನು ಶಿಕಾರಿ .... .... .... | ೧೯ |
| ೮. ಯಂತ್ರಾಹುತಿ .... .... .... | ೨೧ |
| ೯. ಕಾಪಿ ಹೊಡೆಯುವುದು ಹೇಗೆ ? .... .... | ೨೩ |
| ಬೆಂಡಿನ ರುಮಾಲು .... .... .... | ೨೬ |
| ಗಾರ ಬಾಯಮ್ಮ .... .... .... | ೨೮ |
| -ಬಿಕ್ಕಿ .... .... .... | ೩೧ |
| ಠಾರ .... .... .... | ೩೩ |
| ಕ್ನನ ಸಂಸಾರ .... .... .... | ೩೬ |
| ಾದೆಗಳು .... .... .... | ೩೯ |
| ನು ಮಹಾ ! .... .... .... | ೪೦ |



ಸಂಪುಟ ೧ ] ಕೊರವಂಜಿ, ಜನವರಿ ೧೯೪೩ [ ಸಂಚಿಕೆ ೧೦

# ಕು ಹ ಕಿ ಡಿ ಗ ಳು

**ಮದರಾಸು ೩೧೧**

ಸಂ. ೮-೩೦ ಗಂಟೆಗೆ ಖಬರ್ರ—೯-೩೦ ಗಂಟೆಗೆ ಡೆಲ್ಲಿಯಿಂದ ಲೀಲೆ.

—ಈಗರ್ಥವಾಯಿತು ನನಗೆ, ಕೃಷ್ಣಲೀಲೆಯು ದೆಹಲಿಯಿಂದ ಮದರಾಸಿನ ತನಕ ವ್ಯಾಪಿಸಿತ್ತೆಂಬುದು.

* * *

ಗಣಿತಶಾಸ್ತ್ರಾಧ್ಯಾಪಕರೊಬ್ಬರು, ಹುಡುಗರನ್ನು ಹೊಡೆಯುವುದಕ್ಕಿಂತ, ಬೇಜಾರುಪಡಿಸಿದರೆ ಒಳ್ಳೆಯದೆಂದು ಅಭಿಪ್ರಾಯಪಡುತ್ತಾರೆ.

—ಬೇಜಾರುಪಡಿಸುವುದಕ್ಕೆ ಗಣಿತಶಾಸ್ತ್ರಕ್ಕಿಂತ ಮಿಗಿಲಾದುದುಂಟೇ ?

* * *

ಆನೆಯ ಚರ್ಮವು ಒಂದಂಗುಲ ದಪ್ಪವಿದೆಯಂತೆ—

—ಅಂತಹ ಮುಖ ಇರುವವರಿಗೆಲ್ಲಾ ಅಷ್ಟು ದಪ್ಪ ಚರ್ಮವಿರಲೇಬೇಕಲ್ಲವೆ ?

* * *

ವಿಮರ್ಶಕನೊಬ್ಬನು ನವೀನ ಕಾದಂಬರಿಗಳು ಐದಾರು ಅಧ್ಯಾಯಗಳಾಗುವ ತನಕ ಆರಂಭಿಸುವುದೇ ಇಲ್ಲ ಎಂದು ಟೀಕಿಸಿದ್ದಾನೆ.

—ಅದಲ್ಲಾ ಕಷ್ಟ, ಸಮಾಪ್ತಿಯಾಗುವತನಕ ಮುಗಿಯುವುದೇ ಇಲ್ಲ-ಅದು ತಾಪತ್ರಯ.

* * *

—ಹೆಂಗಸೊಬ್ಬಳು ಸ್ವತಃ ವಿಮಾನವೊಂದನ್ನು ಏರಿ ಅಮೇರಿಕಾದಿಂದ-ಚೈನಾಕ್ಕೆ ಬಂದಳಂತೆ.

—ಇದೇನು ಮಹಾ ಸಾಹಸ ! ನಮ್ಮೂರಿನ ಹೆಂಗಸರು ಕಂಡು ಕಾಣದವನನ್ನು ಕಣ್ಣುಮುಚ್ಚಿ ಮದುವೆಯಾಗುವ ಸಾಹಸ ಮಾಡುವುದಿಲ್ಲವೇ ?

* * *

ದೈನಂದಿನ ಪತ್ರಿಕೆಯ ಬಾತ್ಮೀದಾರನೊಬ್ಬನು, ನಮ್ಮಲ್ಲಿ ಬಡವರಿಗೊಂದು ಕಾನೂನು, ಐಶ್ವರ್ಯವಂತರಿಗೊಂದು ಎಂದು ಹೇಳುತ್ತಾನೆ.

—ಅಷ್ಟೇ ಅಲ್ಲ-ಮಧ್ಯಮ ತರಗತಿಯವರಿಗೆ ಮೂರು ಸಾವಿರ ಕಾನೂನು.

* * *

ಕೆಲವು ಹುಚ್ಚಾಸ್ಪತ್ರೆಗಳಲ್ಲಿ, ರೋಗಿಗಳಿಗೆ ಪ್ರಸಿದ್ಧ ಪುಸ್ತಕಗಳನ್ನು ಕೊಟ್ಟು ಓದಿಸುತ್ತಾರಂತೆ.

—ಯಾವುದರಿಂದ ಹುಚ್ಚು ಹಿಡಿಯಿತೋ-ಅದರಿಂದಲೇ ಚಿಕಿತ್ಸೆ ಮಾಡುವುದು ಸೋಜಿಗವಲ್ಲವೇ?

* * *

ಮೊನ್ನಿನ ದಿನ ಕಳುವಾದ ಗ್ರಾಮಫೋನು ಹಿಂತಿರುಗಿ ಮಾಲೀಕನಿಗೆ ವಾಪಸಾಗಿದೆಯಂತೆ.

—ಕೇಳಿ ಕೇಳಿ ಕಳ್ಳನಿಗೂ ಮನಸ್ಸು ಸಡಿಲವಾಗಿದ್ದಿರಬೇಕು

* * *

ತುಂಬಾ ತುಂಟತನ ಮಾಡುವ ಹುಡುಗರು ಮುಂದೆ ಮಂತ್ರಿಗಳಾಗುತ್ತಾರೆ ಎಂದೊಂದು ಮತ.

—ಎಲ್ಲಾ ತುಂಟರಿಗೂ ಈ ಶಿಕ್ಷೆ ಕೊಡಲು ಸಾಧ್ಯವೇ ?

* * *

ಕಲ್ಕತ್ತಾದಲ್ಲಿ ಒಂದೆರಡು ವಿಮಾನಧಾಳಿಗಳಾದುವಂತೆ.

—ನಮ್ಮೂರಿನಲ್ಲೂ ಒಂದೆರಡು ಬಾಂಬು ಬೀಳಬಾರದೆ, ಹಾಗಾದರೂ ಮನೆ ಬಾಡಿಗೆ ಪತೋಟಿಗೆ ಬರುತ್ತದೇನೋ ಎಂದು ಹಲವರ ಅಭಿಮತ,

* * *

'ಆಹಾರದಿಂದ ಹಲವಾರು ಪ್ರಯೋಜನಗಳು' ಎಂಬ ಶಿರೋನಾಮೆಯಲ್ಲಿನ ಲೇಖನವೊಂದನ್ನು ನೋಡಿದೆವು,

—ಒಂದು ಕಂಡ ಪ್ರಯೋಜನ—ಲೇಖನಗಳಿಗೆ ವಸ್ತು.

* * *

ಕೋಣನ ಮುಂದೆ ಪೀಟೀಲು ಬಾರಿಸಿದರೆ ಕೋಣನು ಕುಣಿಯುತ್ತಂತೆ.

—ಕಿನರಿ ಬಾರಿಸಿದರೆ ತಾನೇ ಕೋಣ ರೇಗಬೇಕಾದರೆ.

* * *

ಕ್ಷೌರದ ಸಾಮಗ್ರಿಗಳ ಬೆಲೆ ಏರಿದುವರಿಂದ ಎಲ್ಲರೂ ಇನ್ನುಮೇಲೆ ಗಡ್ಡ ಮೀಸೆ ಬೆಳೆಸುತಿದ್ದಾರಂತೆ.

—ಹೌದು ನಾವು ನೋಡಿದ ಹಲವಾರು ಹುಡುಗಿಯರೂ ಮೀಸೆ ಬಿಡುತ್ತಿದ್ದರು.

# ಹುರಿಗಾಳು

೧

ಮಕ್ಕಳು ಮಲಗುವಾಗ ಅವರಿಗೆ ದಿನವೂ ಒಂದೊಂದು ಚಮಚ ಟೊಮಾಟೊ ರಸ ಕುಡಿಸಿದರೆ ಒಳ್ಳೆಯದು ಅಂತ ಡಾಕ್ಟರುಗಳು ಹೇಳುತ್ತಾರೆ. ಆದರೆ, ಅಲ್ಲಿಯ ವರೆಗೆ ಎಚ್ಚರವಾಗಿರುವಂತೆ ಡಾಕ್ಟರುಗಳು ನಮಗೂ ಏನಾದರೂ ಕೊಟ್ಟರೆ ತಾನೆ ?

೨

ಸಿನಿಮಾಗಳಲ್ಲಿ ಬರುವ ಹಾಡುಗಳು ಇಷ್ಟು ಮನಮೋಹಕವಾಗಿರಲು ಕಾರಣವೇನು ಎಂಬ ಪ್ರಶ್ನೆಗೆ, ಅಲ್ಲಿ ಬರುವ ಅಭಿನಯಾದಿಗಳು ಇಷ್ಟು ಮನನೋವಕವಾಗಿರುವುದೇ ಕಾರಣ ಎಂಬುದೇ ಉತ್ತರ.

೩

ಸಂಗೀತ ಸಭೆಯ ಕಾರ್ಯದರ್ಶಿಗಳು ಮೊನ್ನೆ ಈ ರೀತಿ ಒಂದು ನೋಟೀಸು ಬರೆದು ಬಾಗಿಲಲ್ಲಿ ಹಾಕಿದಾರೆ—"ಮುಂದಿನ ಬುಧವಾರ ಕೀರ್ತನ ಕಾಲಭೈರವ ಕಿರಿಚೂರ್ ನಾರಾಯಣಭಾಗವತರ ಹರಿಕಥೆ ನಡೆಯುತ್ತದೆ. ಅನಂತರ ಕಟ್ಟಡಕ್ಕೆ ಆಗಬೇಕಾದ ಅತ್ಯಗತ್ಯ ರಿಪೇರಿ ಕೆಲಸಗಳಿಗಾಗಿ ಒಂದು ವಾರದವರೆಗೆ ಬಾಗಿಲು ಮುಚ್ಚಿರುತ್ತದೆ."

೪

"ಇನ್ನೇನೂ ಇಲ್ಲ, ಸ್ವಾಮಿ, ತಮಗೆ? ಮನೆಗೆ ಹೋಗಿ ಕೊಂಚ ರವೆ ಪಾಯಸ ಕುಡಿದುಬಿಟ್ಟು ಹಾಗೆ ಮಲಗಿಬಿಡಿ" ಅಂದರು ಡಾಕ್ಟರು. ಅದಕ್ಕವರು, "ಹಾಗೆ ಒಂದು ಚೀಟಿಯಲ್ಲಿ ಬರೆದುಕೊಟ್ಟುಬಿಡಿ, ಡಾಕ್ಟರೇ! ಇಲ್ಲದಿದ್ದರೆ? ಮನೆ ಕಾಂಪೌಂಡರು ಪಾಯಸ ಮಾಡಿಕೊಡೋದಿಲ್ಲ" ಅಂತ ಕೇಳೇಬಿಟ್ಟರು!

೫

"ಇಲ್ಲಿ ಬಾರೋ ಇಲ್ಲಿ! ಐದೂ ಅಂತ ಬರೆದಿರುವುದು ನಾಲ್ಕರ ಹಾಗೆ ಕಾಣಿಸುತ್ತಾ ಇದೆಯಲ್ಲಾ ಸರಿಯಾಗಿ ಬರೆಯುವುದಕ್ಕೆ ಏನೋ ಕೇಡು ನಿನಗೆ?" ಅಂತ ಮೇಷ್ಟರು ಗದರಿಸಿದರೆ, ಶೀನು 'ಅದು ನಾಲ್ಕು ಅಂತಲೇ, ಸಾರ್! ನಾಲ್ಕೆ, ಸಾರ್ ಅದು!" ಅಂತ ಕೂಗಿದ. "ಮತ್ತೆ ಯಾಕೋ ಅದು ಐದರ ಹಾಗೆ ಕಾಣಿಸುತ್ತದಲ್ಲೋ!" ಅಂತ ಬಿಟ್ಟರು ಬೆನ್ನ ಮೇಲೆ ಬೆತ್ತಾನ!

೬

"ಏನಯ್ಯಾ! ಪೆಟ್ಟಿಗೆಯಲ್ಲಿ ಹತ್ತು ರೂಪಾಯಿ ಕಡಿಮೆಯಾಗಿದೆಯಲ್ಲಾ! ಏನು ಹೇಳುತ್ತೀಯಾ? ದಿನವೂ ಕೊಡೋದು ತಕೊಳ್ಳೋದು ನೀನು! ನಿನ್ನ ಹತ್ತಿರ ಒಂದು ಬೀಗದ ಕೈ! ನನ್ನ ಹತ್ತಿರ ಒಂದು! ಬೇರೊಬ್ಬರು ಮುಟ್ಟುವ ಹಾಗಿಲ್ಲ!'' ಅಂತ ಅಮೀಲ್‌ದಾರರು ಗದರಿಸಿದರೆ ಗುಮಾಸ್ತೆ "ಅದಕ್ಕೇನು ಸಾರ್! ನೀವು ಐದು ರೂಪಾಯಿ ಹಾಕಿ! ನಾನೂ ಐದು ರೂಪಾಯಿ ಹಾಕ್ತೀನೆ" ಅಂತ ಹೇಳಿಬಿಡೋದೆ!

೭

"ಅಮ್ಮಾ! ಅಮ್ಮಾ! ಒಂದಿಷ್ಟು ಅಂಬಲಿ ಕೊಡಿ, ಅಮ್ಮಾ!

"ಅಮ್ಮಾ! ಅಮ್ಮಾ!" ಅಂತ ಬಾಗಿಲಲ್ಲಿ ಬೇಡಿಕೊಂಡ, ಭಿಕ್ಷುಕ.

"ಹೋಗೋ! ಇಲ್ಲಿ ನಾವು ಅಂಬಿಲಿ ಗಿಂಬಲಿ ಮಾಡುವುದಿಲ್ಲ. ದೋಸೆ ಕಾಫೀನೇ ನಮ್ಮ ಮನೇಲಿ ಅಭ್ಯಾಸ" ಅಂತ ಆಕೆ ಆರ್ಭಟಿಸಿದರು. ಅದಕ್ಕವನು "ಪರವಾಗಿಲ್ಲ, ತಾಯಿ! ಅದನ್ನೇ ಕೊಡಿ; ಕುಡಿದು ನೋಡುತ್ತೇನೆ'' ಅಂದನಂತೆ.

೮

"ನಮ್ಮ...ಮಂತ್ರಿಗಳು ಮಾಡುವ ಕಾರ್ಯಭಾರವು ಒಬ್ಬರು ಮನುಷ್ಯರಿಂದ ಮಾಡಿ ಮುಗಿಸಲು ಸಾಧ್ಯವಾಗದಷ್ಟಿವೆ" ಎಂದು ಒಂದು ಪತ್ರಿಕೆಯಲ್ಲಿ ಬರೆದಿದೆ. ಆದರೂ, ನಾವು ಅವರನ್ನು ಒಬ್ಬರು ಮನುಷ್ಯರೆಂದೇ ಭಾವಿಸುತ್ತೇವೆ.

೯

"ಬೆಂಕಿ" ಟಾಕೀಸ್‌ನವರು ತಯಾರಿಸುತ್ತಿರುವ "ಬಿಂದು" ಎಂಬ ಚಿತ್ರದ ಹೆಸರನ್ನು ''ಬಿಂದುವಿನ ಕೊಲೆ" ಎಂದು ಬದಲಾಯಿಸಿ ಇಷ್ಟರಲ್ಲೇ ಹೊರಗೆಡಹುವರೆಂದು, ಗೊತ್ತಾಗಿದೆ. ಕಡೆಗೆ, ಅದನ್ನು ನೋಡುವುದಕ್ಕಾಗಿ ಬಂದವನ ಕೊಲೆ ಆಗದೆ ಇದ್ದರೆ ಅಷ್ಟಕ್ಕೇ ನಾವು ತೃಪ್ತಿ ಹೊಂದೋಣ.

---



ಸಕ್ಕರೆಇಲ್ಲದ ಸಂಕಟ

# ಅವಿವಾಹಿತರಿಗೊಂದೆಚ್ಚರಿಕೆ !

ಪ್ರಾಯದ ಹುಡುಗರೆಲ್ಲರಿಗೂ 'ಹೆಣ್ಣು ನೋಡುವ' ಅನುಭವ ಇದ್ದೇ ಇರಬೇಕು. ಆ ಸನ್ನಿವೇಶಗಳು ಅವರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿರಬೇಕು. ಹತ್ತಾರು ಕಡೆ ಆತಿಥ್ಯ, ಹಲವಾರು ಜನರ ಪರಿಚಯ, ಉಚಿತ ಪ್ರವಾಸ, ಚೊಕ್ಕ ಭೋಜನ, ಸಂಗೀತ ಶ್ರವಣ ಇವೆಲ್ಲವೂ ಆಗಿನ ಸವಿನೆನಪುಗಳು. ಆದರೆ, ನನಗಾದ ಒಂದು ಕಹಿ ನೆನಪು ಮಾತ್ರ ಇತರರಿಗೆ ಆಗದಿರಲಿ ಎಂದು ನನ್ನ ಪ್ರಾರ್ಥನೆ. ನನ್ನ ಸ್ನೇಹಿತರ ಹಾಗೆ ನಾನೂ ದೊಡ್ಡ ದೊಡ್ಡ ಅಧಿಕಾರಿಗಳ ಮಗಳ ಕೈಹಿಡಿದು ಅವರ ಮನೆ ಸೇರಿಬಿಟ್ಟರೆ ಜೀವನ ನಾಟಕವನ್ನು ಲೀಲಾಜಾಲವಾಗಿ ಸಾಗಿಸಿಬಿಡಬಹುದೆಂದು ಕನಸು ಕಂಡಿದ್ದೆ. ಆದ್ದರಿಂದ ರಾಮಸಾಗರದಿಂದ ದೂತರು ಬಂದು ನನ್ನನ್ನ........ರ ಮನೆಗೆ 'ಹೆಣ್ಣು ನೋಡಲು' ಕರೆದೊಯ್ದಾಗ ನನ್ನ ಆನಂದಕ್ಕೆ ಮಿತಿಯೇ ಇರಲಿಲ್ಲ. ಅವರ ಡ್ರಾಯಿಂಗ್ ರೂಂ ಸೋಫಾದಲ್ಲಿ ಕುಳಿತಾಗ ನನಗೆ ಸ್ವರ್ಗ ಸೋಪಾನದಲ್ಲೇ ಕುಳಿತಂತಾಯಿತು. ಕಾಫಿ ಅಂತೂ ಅಮೃತ, ಕಾಬೂಲುದ್ರಾಕ್ಷಿ ಬೇರೆ ಗೊಂಚಲು ಗೊಂಚಲಾಗಿ; ಊಟಕ್ಕೆ ಗಟ್ಟಿ ಮೊಸರು! ನಾನೆಂದೂ ಅಂತಹ ಊಟ ಉಂಡಿರಲಿಲ್ಲ. ಕೋಲಾರ ಚಿತ್ರದುರ್ಗ ಡಿಸ್ಟ್ರಿಕ್ಟ್‌ಗಳಲ್ಲಿ ನಾನೂ ಏಳೆಂಟು ಹೆಣ್ಣು ನೋಡಿದ್ದೆ. ಅವೆಲ್ಲ ಕೇವಲ ಇಸ್ಕೂಲ್ ಮೇಸ್ಟರ ಮಗಳು ; ಹೆಚ್ಚೆಂದರೆ, ತಾಲ್ಲೋಕು ಆಫೀಸ್ ಹೆಡ್‌ಕ್ಲಾರ್ಕುಗಳು, ಹಾಸನದಲ್ಲಿ ನನಗೆ ಗಟ್ಟಿ ಮೊಸರು ಹಾಕಿದವರು ಸಾಕ್ಷಾತ್....ರು! ನಾಲ್ಕು ಬಾಗಿಲಿಗೂ ನಾಲ್ಕು ಜವಾನರು! ಸೌದೆ ಒಡೆಯುವುದಕ್ಕೊಬ್ಬ, ಮಕ್ಕಳನ್ನೆತ್ತಿ ಕೊಳ್ಳುವುದಕೊಬ್ಬ, ಸರಕಾರಿ ಸಂಬಳದ ನೌಕರರು, ಅಂತಹ ದೊಡ್ಡ ಅಧಿಕಾರಿಗಳು.

ಬೆಳಗ್ಗೆ ಹೋದವನು ಸಂಜೆ ಐದೂವರೆ ಗಂಟೆ ತನಕ 'ಹೆಣ್ಣು ನೋಡ'ಲೇ ಇಲ್ಲ. ಆ ಅಧಿಕಾರಿಗಳ ಪ್ರತಾಪದ ಕಥೆಯನ್ನು ಮಾತ್ರ ಕೇಳುತ್ತಿದ್ದೆ. ಅವರೇ ನನ್ನೆದುರು ಕುಳಿತು ಹೇಳುತ್ತಿದ್ದರು, ಅವರ ತಂದೆ ಅವರ ತಾತಂದಿರು ಎಲ್ಲರೂ ಹಾಸನದಲ್ಲಿ ಭಾರಿ ಭಾರಿ.....ಯಾಗಿದ್ದರಂತೆ. ಅವರು ಲೋವರ್‌ಸೆಕಂಡರಿಗೆ ಕಟ್ಟಲೇ ಇಲ್ಲವಂತೆ. ಹಾಗೆಯೇ ಮೇಲಕ್ಕೆ ಬಂದರಂತೆ. ಎಸ್ಸೆಸ್ಸೆಲ್‌ಸೀಲಿ ಅವರದೇ ಅಂತೆ ಮೊದಲನೇ ನಂಬರು. ಏನೇನೋ ಬುರುಡೆ ಬಿಟ್ಟರು. ಗೋಡೆ ವೇಲಿನಿಂದ ಅವರ ತಾಯಿ ಫೋಟೋನ ಕೆಳಕ್ಕಿಳಿಸಿ ತೋರಿಸಿದರು. ಅವರ ಸಂಸಾರ ಗ್ರೂಪ್ ಫೋಟೋವನ್ನೂ ತೋರಿಸಿದರು. "ಸರಸು ಇನ್ನೂ ಹುಟ್ಟಿರಲಿಲ್ಲ, ಈ ಫೋಟೋ ತೆಗೆದಾಗ" ಅಂದರು. ಹಾಗಂದಾಗ ಅವರ ತಲೆ ನಾಚಿಕೆಯಿಂದ ತಗ್ಗಿತು. "ಅದಕ್ಕೇನು ಪರವಾಗಿಲ್ಲ! ಆಮೇಲೆ ಆದರೂ ಆಯಿತಲ್ಲ" ಎಂದು ನಾನು ಸಮಾಧಾನ ಹೇಳಿದೆ. "ಇದೇ ಅವಳ ಅಕ್ಕ! ಇದು ಸೋಮು! ನನ್ನ ಮೂರನೆಯ ಮಗ! ಸರಸೂನ ನೀವು ನೋಡಬೇಕಾಗಿಯೇ ಇಲ್ಲ. ಅವಳ ಅಕ್ಕನ ಫೋಟೋ ನೋಡಿದ ಮೇಲೆ ಅಂದರು. ಆ ಫೋಟೋವಿನಲ್ಲಿ ಸರಸು ಅಕ್ಕನನ್ನ ಅವಳ ತಾಯಿ ಕೊಂಕುಳಲ್ಲಿ ಕೂರಿಸಿಕೊಂಡು ನಿಂತಿದ್ದಳು! ಸರಸು ಅಕ್ಕನ ಬಾಯಲ್ಲಿ ಒಂದು ರಬ್ಬರ್ ನಿಪ್ಪಲ್ ಬೇರೆ ಇತ್ತು! ........ನನಗೆ ನಗು ಬಂತು, ತಡೆದೆ, ಕೋಪ ಬಂತು, ನುಂಗಿದೆ.

"ಈಗ ಸರಸುವಿಗೆ ವಯಸ್ಸೆಷ್ಟು? " ಎಂದು ಧೈರ್ಯವಾಗಿ ಕೇಳಿದೆ. ಅವಕ್ಕ ವರು ನೀವೇ ಲೆಕ್ಕಹಾಕಿ! ಈ ಫೋಟೋ ತೆಗಿದಾಗ ಸರಸು ಅಕ್ಕನಿಗೆ ಎರಡು

ವರ್ಷ! ಅವಳಾದ ಮೇಲೆ ಶೀನು, ಶೀನುವಾದ ಮೇಲೆ ಬಾಲು, ಬಾಲುವಿಗೆ ಎರಡು ವರ್ಷವಾಗಿದ್ದಾಗ ಸರಸು....ಎರಡೆರಡು ವರ್ಷ ಲೆಕ್ಕಾಚಾರ....ಈಗ ಸರಸು ಅಕ್ಕನಿಗೆ ೨೪ ಅಂದರು. ಲೆಕ್ಕ ಅಂದರೆ ಮೊದಲಿಂದಲೂ ತಲೆಶೂಲೆಯಾದ ನನಗೆ "ಯಾಕಪ್ಪ ಈತನ ಸಹವಾಸ?" ಅನ್ನಿಸಿತು.

"ಸರಸು ಹಾಡುತ್ತಾಳೆಯೇ?" ಅಂದೆ. ಹಾಡುವುದಕ್ಕಾದರೂ ಹುಡುಗಿಯನ್ನ ಮುಂದೆ ತಂದು ಕೂರಿಸುತ್ತಾರೋ ಏನೋ? ಹೆಣ್ಣು ನೋಡಿ ಮುಂದಕ್ಕೆ ಹೊರಡೋಣ ಅಂತ ನನ್ನ ಪಿತೂರಿ. ಅದಕ್ಕೆ ಆ ಮಹರಾಯರು ಇನ್ನೊಂದು ಎದುರು ಪಿತೂರಿ ಹೂಡಿದರು. "ಸರಸು ಹಾಡುತ್ತಾಳೆಯೇ ಎಂಬ ಅನುಮಾನವೇ ಬೇಡಿ ನಿಮಗೆ........ ನಾನೇ ಅವಳಿಗೆ ಪಾಠ ಹೇಳಿದವನು. ನಮ್ಮ ಹಿರಿಯರು ಹೊಯ್ಸಳರ ಆಸ್ಥಾನದಲ್ಲಿ ವಿಷ್ಣುವರ್ಧನನ ಪಟ್ಟದರಸಿ ಶಾಂತಳಾದೇವಿಗೆ ವೀಣೆ ಕಲಿಸಿದವರು" ಎಂದು ಹೇಳಿ ಅವರೇ ವೀಣೆ ಹಿಡಿದುಕೊಂಡು ಕೂತು ಠೊಯ್ ಠೊಯ್ ಅಂತ ಆ ಬಡತಂತಿಗಳನ್ನೆಳೆದು ಪೀಡಿಸಿದರು. "ಇದು ಯಾವ ರಾಗ ಹೇಳಿ" ಅಂತ ನನ್ನನ್ನೇ ಕೇಳಿದರು. ರಾಗ ಜ್ಞಾನ ಕೊಂಚವೂ ಇಲ್ಲದ ನನಗೆ "ಕರ್ಕಶ ರಾಗ" ಅಂತ ನಿರ್ಧರವಾಗಿ ಹೇಳೇ ಬಿಡೋಣವೆನ್ನಿಸಿತು; ಅನ್ನಲಿಲ್ಲ.

ಕೊಂಚ ಹೊತ್ತಿನ ಮೇಲೆ ಅವರು ವೀಣೆಯನ್ನ ಕೆಳಕ್ಕಿರಿಸಿ ಬೆವರೊರಸಿಕೊಂಡು ನನ್ನ ಪಕ್ಕದಲ್ಲೇ ಸೋಫಾದಲ್ಲಿ ಕುಳಿತರು. ಶೀನು ಕೈಯಲ್ಲಿ ನೀರು ತರಿಸಿ ಕುಡಿದರು. ಮಹರಾಯ ಕೊಂಚ ದೂರ ಕೂರಬಾರದೆ, ಅನ್ನಿಸಿತು, ನನಗೆ. ಅನಂತರ ನನಗೆ ಒಂದೇ ಉಸರಿನಲ್ಲಿ ಹತ್ತಿಪ್ಪತ್ತು ಪ್ರಶ್ನೆಗಳನ್ನು ಹಾಕಿದರು "ನಿಮ್ಮ ಊರು ಮಧುಗಿರಿ ಅಂತ ಹೇಳುತ್ತೀರಿ! ಆ ಹೆಸರು ಯಾಕೆ ಬಂತು ಆ ಊರಿಗೆ? ಆ ಗಿರಿ ಭೂಶಾಸ್ತ್ರ ರೀತ್ಯಾ ಎಷ್ಟು ಹಳೆಯದು? ಅಲ್ಲಿನ ಕೋಟೆಯಲ್ಲಿ ಆಳಿದ ಅರಸರುಗಳು ಯಾವ ಜಾತಿಯವರು, ಅವರು ವಿಜಯನಗರದ ಅರಸರುಗಳ ಮೇಲೆ ಯಾವಾಗ ಯಾವಾಗ ದಂಗೆ ಎದ್ದರು? ಮಧುಗಿರಿಯಲ್ಲಿ ದಾಳಿಂಬೆ ಗಿಡವನ್ನು ಮೊದಲು ನೆಟ್ಟವರು ಯಾರು? ದಾಳಿಂಬೆ ಎಂಬುದು ಸರಿಯೋ, ಮಾದಳ ಎಂಬುದು ಸರಿಯೋ? ಇಂಗ್ಲೀಷಿನಲ್ಲಿ ಅದಕ್ಕೆ ಏನು ಹೆಸರು? ಅದು ಯಾವ ಸಸ್ಯ ವಿಭಾಗಕ್ಕೆ ಸೇರಿದ್ದು? ಒಳಗೆ ಎಷ್ಟು ಮುತ್ತುಗಳಿವೆ ಎಂದು ಹೊರಗಿಂದಲೇ ಎಣಿಸುವುದು ಸಾಧ್ಯವೇ? ಯಾಕೆ ಸಾಧ್ಯವಿಲ್ಲ? ದಾಳಿಂಬೆ ರಸಕ್ಕೂ ನಿಂಬೆ ರಸಕ್ಕೂ ರಾಸಾಯನಿಕ ವ್ಯತ್ಯಾಸವೇನು? ಇತ್ಯಾದಿ, ಇತ್ಯಾದಿ........

ಕಡೆಗೆ ನಾನು ಸೋಫಾದಿಂದ ಎದ್ದೆ. ನೀರು ಕೇಳಿದೆ. "ಏನಿದು? ಎಂ.ಸಿ.ಎಸ್. ಪರೀಕ್ಷೆಯೇ?" ಅಂದೆ. ಅದಕ್ಕವರು "ಹೌದು! ಮಸಲಾ ಸರಸುವನ್ನ ನಿಮಗೆ ಕೊಟ್ಟರೆ, ನೀವು ಎಂ. ಸಿ. ಎಸ್ಸಿಗೆ ಕೂತುಕೊಳ್ಳಬೇಕಾಗುತ್ತದೆ. ಆಗ ಮಸಲಾ ನಿಮ್ಮನ್ನ ಇದೇ ಪ್ರಶ್ನೆಗಳನ್ನೇ ಕೇಳುತ್ತಾರೆ. ಆದ್ದರಿಂದ ನಿಮ್ಮ ಚೈತನ್ಯ ಎಷ್ಟು ಅಂತ ಈಗಲೇ ತಿಳಿದುಬಿಡೋಣ ಅಂತ ಇಷ್ಟೆಲ್ಲಾ ಕೇಳಿದೆ........ಈಗ, ತಾವು ಹೊರಡಬಹುದು" ಅಂದರು. ಸರಸೂನ ತರಲೇ ಇಲ್ಲ.

ಜವಾನ ನನಗೆ ಬಾಗಿಲು ತೋರಿಸಿದ. ಆ ಸರಸುವಿಗೆ ಇನ್ನೂ ಮದುವೆಯಾಗಿಲ್ಲ. ನೀವೂ ಹುಷಾರಾಗಿರಿ. ರಾಮಸಾಗರಕ್ಕೆ ನಿಮ್ಮನ್ನೂ ಕರಿಸಬಹುದು.

# ಕನ್ನಡ ಚಿತ್ರೋದ್ಧಾರ

ಪೇಟೆಯಲ್ಲಿ ಮಹಡಿ ಮನೆಗಳ ಮೇಲೆಲ್ಲಾ ದೊಡ್ಡಕ್ಷರದ ಗುರುತುಗಳು 'ಕನ್ನಡದ ಅತ್ಯುತ್ತಮವಾಕ್‌ಚಿತ್ರ'

ದೈನಂದಿನ ಪತ್ರಿಕೆಗಳಲ್ಲೆಲ್ಲಾ ಕಣ್ಣಿಗೆ ತಾಕುವಂತೆ ಹಿರಿಪಂಗ್ತಿಗಳು 'ಕನ್ನಡ ವಾಕ್‌ಚಿತ್ರಗಳ ಪುನರುದ್ಧಾರ'

ಪ್ರತಿಯೊಂದು ಜಾಹೀರಾತಿನಲ್ಲೂ ಉತ್ಪ್ರೇಕ್ಷೆಯ ಔನ್ನತ್ಯ 'ಸಹಸ್ರಾರು ಕೋಟಿ ರೂಪಾಯಿ ವೆಚ್ಚವಾದುದು'

'ಅತ್ಯುತ್ತಮ ತಾರಾಗಣ'

'ಮೇಲ್ಪಂಗ್ತಿಗೆಂದು ಹಾಲಿವುಡ್ಡೂ ಕೂಡ ನಮ್ಮ ಚಿತ್ರಕೊಂಡಿದೆ'

ಇವೆಲ್ಲವನ್ನೂ ನೋಡಿ ನೋಡಿ ನಾನು ಸುಮ್ಮನೇ ಇದ್ದೆ. ಆದರೆ ಇದನ್ನು ನೋಡಿದ ನನ್ನ ಹೆಂಡತಿ ಮಕ್ಕಳ ಕಾಟವನ್ನು ತಪ್ಪಿಸಿಕೊಳ್ಳಲಾರದೆ ಕೆಲವು ಕನ್ನಡ ವಾಕ್ಚಿತ್ರಗಳನ್ನು ನೋಡಲೇಬೇಕಾಯಿತು. ಅವುಗಳ ಕುಹಕಾನುಭವವೇ ಇದು.

* * *

ಪರಿಶೋಧಕಕಾರರ ಸಿದ್ಧಾಂತದಂತೆ ಕನ್ನಡ ಚಿತ್ರದ ಅಸ್ತಕಾಲಕ್ಕೂ ಪುನರುದ್ಧಾರ ಕಾಲಕ್ಕೂ ಐದು ವರ್ಷ, ಹತ್ತು ತಿಂಗಳು, ಏಳು ದಿನಗಳಂತೆ. ಆರನೇ ವರ್ಷದ ಅಂತ್ಯದಲ್ಲಿ ಬ್ರಹ್ಮಸೃಷ್ಟಿಯ ಆದಿಯುಗದಲ್ಲಿ ಮಹಾಸಾಗರದಿಂದ ಜಗತ್ತಿನ ಸೌಂದರ್ಯಜ್ಯೋತಿ ಊರ್ವಶಿಯು ಉದ್ಭವಿಸಿದಂತೆ, ಬೆಂಗಳೂರು 'ಸಾಗರ'ದಲ್ಲಿ ಸುಭದ್ರಾ ಅವತರಿಸಿದಳು. ಪರಭಾಷಾ ವಾಕ್ಚಿತ್ರಗಳಲ್ಲಿ ಬೇಸರ ಹೊಂದಿದ್ದ ನನ್ನ ಹೆಂಡಿರು ಮಕ್ಕಳು, 'ಅಣ್ಣಾ ಸುಭದ್ರಕ್ಕೆ ಯಾವಾಗ ಹೋಗೋದು' ಎಂದು ಗೋಳು ಹುಯ್ಯಲಾರಂಭಿಸಿದರು. ಕಡೆಗೆ ಒಂದು ಸಂಧ್ಯಾಕಾಲ ಸಪರಿವಾರ, ಸಾಗರಕ್ಕೆ ಹೋದೆ. ಟಿಕೇಟು ತೆಗೆಯುವ ಸಂಭ್ರಮದಲ್ಲಿ ಜೋಬಿನಲ್ಲಿದ್ದ ಅಡಿಕೆ ಚೀಲವನ್ನು ಕಳೆದುಕೊಂಡೆ. ಪರಿವಾರವನ್ನು ಒಳಗೆ ಕೂರಿಸಿ, ನಾನು ಜೈಲು ರಸ್ತೆಯಲ್ಲಿ ಅಡ್ಡಾಡಲಿಕ್ಕೆಂದು ಹೊರಟೆ.

ಮರುವಾರ ಮನೆಯಲ್ಲೆಲ್ಲಾ ಸುಭದ್ರಾ ಮಾತೆ. 'ಅರ್ಜುನ ಬಲು ಚೆನ್ನಾಗಿ ಹಾಡಿದ್ದಾನೆ, ದೊಡ್ಡವನಾದ ಮೇಲೆ ನಾನು ಅವನಂತೆಯೇ ತೀರ್ಥಯಾತ್ರೆ ಹೊರಟು ಮೂರು ಮದುವೆ ಮಾಡಿಕೊಳ್ಳುತ್ತೇನೆ' ಎಂದು ನನ್ನ ಮಗ ನಿರ್ಧಾರಮಾಡಿದ.

'ಉಲೂಪಿ ಎಷ್ಟು ಚೆನ್ನಾಗಿ ಹಾಡುತ್ತಾಳೆ. ಎಷ್ಟು ಅಂದವಾಗಿ ಹೂವೆರಚುತ್ತಾಳೆ. ನಾನು ಇನ್ನು ಮೇಲೆ ಹಾಗೇ ಹೂವು ಮುಡಿದುಕೊಳ್ಳುತ್ತೇನೆ ಕಿವಿ ಮೇಲೆಲ್ಲಾ' ಎಂದು ನನ್ನ ಮಗಳು.

ಅವಳಿಗೆ ಒಂದೇ ಅನುಮಾನ, 'ಈಗಲೂ ನಾಗಲೋಕದಲ್ಲಿ ನಾಗಕನ್ನಿಕೆಯರಿದ್ದಾರೆಯೇ' ಎಂದು.

ಇಲ್ದೇ ಎಲ್ಲಿ ಹೋಗ್ತಾರೆ, 'ಪಾತಾಳದಲ್ಲಿ ಪಾಪಚ್ಚಿ' ಓದಿಲ್ಲವೇ ಎಂದು ನನ್ನ ಮಗನ ಸಾಕ್ಷ್ಯ.

'ಸುಭದ್ರೆ ಒಬ್ಬಳು ಚೆನ್ನಾಗಿ ಪಾರ್ಟು ಮಾಡಿದ್ದಾಳೆ. ನೋಡುವುದಕ್ಕೆ ಅದೊಂದೇ' ಎಂದು ನನ್ನ ಪತ್ನಿಯ ಅಭಿಪ್ರಾಯ.

ಕಡೆಯದಾಗಿ ನನ್ನ ಕುಮಾರನ ಪ್ರಶ್ನೆ 'ದ್ರಾಪದೀನ ನೋಡಿದ್ದೇ ಅರ್ಜುನ ಯಾತ್ರೆಗೆ ಹೋದುದು ಏಕೆ' ಇದಕ್ಕೆ ಯಾರೂ

ಉತ್ತರ ಕೊಡಲಾಗಲಿಲ್ಲ—ಹುಡುಗರಿಗೆ ತಿಳಿಯುವಂತೆ—

*  *  *

ಗರತಿಯರಿಗಿಂತ ಸೂಳೆಯರು ಏತರಲ್ಲಿ ಕಡಿಮೆ ಎನ್ನುವುದನ್ನು ತೋರಿಸುವುದಕ್ಕೆ ಸಾಗರದಿಂದ ಸುಭದ್ರೆಯು ಹೊರಟಳೋ ಇಲ್ಲವೊ, ವಸಂತಸೇನೆಯು ಕಾಲಿಟ್ಟಳು. ಸಾಗರದಲ್ಲಿ ವಸಂತಸೇನೆ ಬಂದರೆ ನಮ್ಮ ಮನೆಯಲ್ಲಿ ನನಗೆ ಉಳಿಗಾಲವಿಲ್ಲ. ಸರಿ ಯಥಾಪ್ರಕಾರ ಸಾಗರಯಾತ್ರೆ—ಸಪರಿವಾರ—.

ಶೂದ್ರಕನ ವಸಂತಸೇನೆ ಉಜ್ಜಯನಿಯ ರೂಪಗೌರವ.

ಚಿತ್ರದ ವಸಂತಸೇನೆ ಚಾರುದತ್ತನ ಅವಿವೇಕದ ಸುರ. ಚಾರುದತ್ತ ದರಿದ್ರ ಬ್ರಾಹ್ಮಣನಾದರೂ, ಬ್ರಾಹ್ಮಣಾರ್ಥಗಳಲ್ಲಿ ಪಟ್ಟಾಗಿ ಹೊಡೆದು ದೇಹವನ್ನು ಬೆಳೆಸಿದ್ದ. ವಸಂತಸೇನೆಯ ಧನ, ದೇಹಗೌರವ ಅವನನ್ನು ಆಕರ್ಷಿಸಿತು. ಸಜಾತೀಯ ವಸ್ತುಗಳ ಪರಸ್ಪರ ಆಕರ್ಷಣಕ್ಕೆ ನಿದರ್ಶನ.

ಚಿತ್ರ ನೋಡಿದ ಒಂದು ತಿಂಗಳು ನನ್ನ ಮಗನು ಶಕಾರನ ಪಾತ್ರಾಭಿನಯವನ್ನು ಬಿಡಲಿಲ್ಲ. ತಲೆದಿಂಬನ್ನು ವಸಂತಸೇನೆಯಾಗಿ ಮಾಡಿ ಬೆತ್ತದಿಂದ ಹೊಡೆದು, ತರಗೆಲೆಯ ಬದಲಾಗಿ ಹಳೆಯ ಬಟ್ಟೆಗಳನ್ನು ಹೊದಿಸುವನು. ಈ ಹುಚ್ಚು ಬಿಡಿಸಲು ಅದೇ ಬೆತ್ತದ ಸಹಾಯ ನಾನು ಪಡೆಯಬೇಕಾಯಿತು.

ನನ್ನ ಪತ್ನಿಯು ವಸಂತಸೇನೆಯ ಪಾರ್ಟು ಮಾಡಿದಾಕೆಯ ಹುಟ್ಟು ಸ್ಥಳ, ಜನ್ಮ-ಗೋತ್ರ ಎಲ್ಲವನ್ನೂ ಎರಡೇ ದಿನಗಳಲ್ಲಿ ಕಂಡುಹಿಡಿದು ಹೇಳಿದಳು.

ಈ ಪ್ರಸಂಗವೆಲ್ಲಾ ಮುಗಿಯುವುದಕ್ಕೆ ಮುಂದಿನ ಚಿತ್ರದ ಆಗಮನವೇ ಕಾರಣವಾಯ್ತು.

ಜೀವನನಾಟಕ ನೋಡುವಂತಾದುದು, ಕಛೇರಿ ಕೆಲಸಕ್ಕಾಗಿ ಮೈಸೂರಿಗೆ ದಸರಾಕ್ಕೆಂದು ಹೋದುದರಿಂದ. ಸಪರಿವಾರ ಸಿನೀಮಾ ನೋಡಲೇಬೇಕಾಯಿತು.

ಚಿತ್ರದಲ್ಲಿನ ಬೃಂದಾವನ ಕನ್ನಂಬಾಡಿಯದಕ್ಕಿಂತ ಎಷ್ಟೋ ಚೆನ್ನು ಎಂದು ನನ್ನ ಮಗಳ ಅಭಿಪ್ರಾಯ.

ಜೀವನ ನಾಟಕ ಹಿಂದೀ ಚಿತ್ರಗಳ ಮಟ್ಟಕ್ಕೇರಿದೆ ಎಂದು ನನ್ನ ಹೆಂಡತಿಯ ತೀರ್ಪು.

'ಗ್ರೀಟಾಗಾರ್ಬೊ, ನಾರ್ಮಾ ಷಿಯರರ್ ಎಲ್ಲಿ ಈ ನಾಟಕದ ತಾರೆಗಳೆಲ್ಲಿ' ಎಂದು ನನ್ನ ಆಕ್ಷೇಪಣೆ.

'ಅವರನ್ನೂ ನೋಡಿದ್ದೇನೆ; ನಮ್ಮ ಹುಬ್ಲೀಕರ್, ಜಯಮ್ಮ ಅವರಿಗೇನೂ ಕಡಿಮೆಯಿಲ್ಲ' ಎಂದು ನನ್ನ ಹೆಂಡತಿಯ ಸಮಾಧಾನ.

ಇವೆಲ್ಲಾ ಆದಮೇಲೆ ನನಗೆ ಹೀಗೆ ತೋಚುತ್ತದೆ. ಸುಭದ್ರಾ ಚಿತ್ರದ ಅರ್ಜುನ ಹೆಣ್ಣುಗಳ ಸಂಗ್ರಹದಲ್ಲಿ ಹಣ್ಣಾದವನು. ಬಂದರಿಗೊಬ್ಬ ಸುಂದರಿಯು ನಾವಿಕನಿಗಿದ್ದರೆ, ಧರ್ಮಾನುಜ ಧನಂಜಯನಿಗೆ ರಾಜ್ಯಕೊಬ್ಬ ರಾಜನಂದಿನೀ. ಹೋದ ಕಡೆ ತಾಳೀ ಕಟ್ಟುವುದೇ ಅವನ ನಿತ್ಯ ಜೀವನ. ಕಡೆಗೆ ಹೆಣ್ಣಿಗಾಗಿ ಸನ್ಯಾಸಿಯಾಗಿ ಆಗಿನ ಸಾಮಾಜಿಕ ಪರಿಸ್ಥಿತಿಯನ್ನು ವಿಡಂಬಿಸಿದ್ದಾನೆ. ಕೈ ಹಿಡಿದವರಿಗಾಗಿ ದುಡಿದು ಕೂಳು ಕಾಣಿಸುವ ಅಗತ್ಯ

ವಿದ್ದರೆ ಹಾಗೆ ಮಾಡುತ್ತಿದ್ದನೋ ಇಲ್ಲವೋ ಸಂದೇಹ.

ವಸಂತಸೇನಾ ಚಿತ್ರ ಆರ್ಥಿಕ ಸಮಸ್ಯೆಯ ಪರಿಹಾರವನ್ನು ಸೂಚಿಸಿದೆ. ದುಡ್ಡಿದ್ದ ಗಣಿಕೆಯೊಬ್ಬಳನ್ನು ಒಲಿಸಿಕೊಂಡರಾಯಿತು. ಚೌರ್ಯ ದ್ಯೂತ ಇವೆರಡಕ್ಕಿಂತ ಈ ವಿಧಾನ ಧನಸಂಗ್ರಹಕ್ಕೆ ಅನುಕೂಲ.

ಜೀವನ ನಾಟಕವು ಇವೆರಡಕ್ಕೂ ಸಂಪೂರ್ಣ ವಿರುದ್ಧ. ಇದರಲ್ಲಿನ ಗಣಿಕೆ ಅರ್ಧ ನಟಿ ಅರ್ಧ ಗಣಿಕೆ. ನಟಿಯಾಗಿದ್ದಾಗ ತನಗಾದ ಅಪಮಾನದ ಸೇಡು ತೀರಿಸಿಕೊಳ್ಳಲು ಗಣಿಕೆಯಾಗುತ್ತಾಳೆ. ಪ್ರತೀಕಾರ ಮುಗಿದೊಡನೆ ಮೋಹನನನ್ನು ಹೊರಗೆ ದೂಡುತ್ತಾಳೆ.

ಈ ಪುನರುದ್ಧಾರವು ಮುಂದುವರಿದರೆ ನಮ್ಮ ವೈದಿಕ ಸಂಪಾದಕರು ಹೇಳಿದಂತೆ ಬಾಲ್ಯವಿವಾಹ, ವಿಧವಾ ವಪನ, ವಿಧುರ ವಿವಾಹ, ದೇವಾಲಯ ಪ್ರವೇಶ, ಧಾನ್ಯದ ರೇಷನಿಂಗ್, ಇತ್ಯಾದಿ ಸಾಮಾಜಿಕ ಸಮಸ್ಯೆಗಳ ವಸ್ತುವುಳ್ಳ ಕನ್ನಡ ಚಲನ ಚಿತ್ರಗಳು ಬಂದೇ ಬರುವುವು.

—ಬಿ. ಪು.

---

ಮಂಗಳೂರಿನಲ್ಲಿ ಶುದ್ಧ ಕನ್ನಡ ಮಾತನಾಡಲ್ಪಡುತ್ತದೆಯೇ ?
—ಮಂಗಳೂರಿನ ಉತ್ತರ-ಹೌದಾ ?

* * *

ಚೈನಾದಲ್ಲಿನ ವೈದ್ಯನೊಬ್ಬನ ಹೆಸರು ತ ಥಾಸ್ತು ಎಂದಂತೆ.
—ವೈದ್ಯಕೀಯ ವಿಚಾರಗಳಲ್ಲಿ ಅವನದೇ ಕೊನೆಯ ಮಾತು.

* * *

ಯುದ್ಧಕಾರ್ಯಾಚರಣೆಯಿಂದ ಈಗ ಹಾರ್ಮೋನಿಯಂಗಳು ತಯಾರಾಗುವುದಕ್ಕೆ ಅಡಚಣೆಯಂತೆ.
—ಯುದ್ಧದಿಂದ ಪ್ರಯೋಜನವೇನು ಎನ್ನುವವರಿಗೆ ಉತ್ತರ ದೊರಕಿತಲ್ಲ.

* * *

# ಹಾಸ್ಟಲ್ ರಂಗಪ್ಪನ ದಶಾವತಾರ

**[ ರಂಗಪ್ಪ ಬಂದವ್ನೆ, ಬಾಕ್ಲಲ್ಲಿ ನಿಂತವ್ನೆ—ಎಂಬಂತೆ ]**

೧

ಹಾಸ್ಟಲ್‌ನ ಬಾಕ್ಲಲ್ಲಿ ರಂಗಪ್ಪ ಬಂದವ್ನೆ!
ಗಾಡಿಯಿಂದಿಳಿದವ್ನೆ!
ಬಾಡಿಗೆ ಚೌಕಾಶಿ ಜಗಳಾನೆ ಮಾಡ್ತವ್ನೆ!
ಕೂಕ್ಕೋತ ನಿಂತವ್ನೆ!

೨

ಸೋಪ್ ಬಾಕ್ಸ ಹಿಡಿದವ್ನೆ! ನೀರ್ಮನೆಲಿ ಕುಂತವ್ನೆ?
ಚಲ್ ಚಲ್‌ರೆ ಚೀರ್ತ್ತಾನೆ !
ರೋಪ್ ಮಾಡ್ತ ಶಂಖ ತಾನೇನೆ ಊತ್ತಾನೆ !
ಹೊಡೆಕೋತ ಮುಂದಾನೆ !

೩

ಮುತ್ತುಗ್ದ ಎಲೆಮ್ಯಾಲೆ ತುಪ್ಪಾನ ಚೆಲ್ತಾನೆ!
ಎವ್ರ್ಯಾಸ್ರು ಕಲಸ್ತಾನೆ !
ಮಟ್ಸಸವಾದಾತ ಹೊಟ್ಟೇಲಿ ತುಂಬ್ತಾನೆ !
ಘಟ್ಟಾಗಿ ನಗ್ತಾನೆ !

೪

ತನ್ನೆರಡು ಕಿವಿಗಳ್ಗೆ ಕನ್ನಡ್ಕ ತಗಲ್ಸ್ಯಾನೆ !
ಬೆಳಸ್ಯಾನೆ ಹುಳುಮೀಸೆ !
ಮುತ್ತ್ರೊಬ್ಬನ್ ರೂಂನಲ್ಲಿ ಚಿತ್ರಂಜನ ಎಣ್ಣೇಲಿ
ಕುರುಳೋಳಿ ಬಾಚ್ಯಾನೆ !

೫

ಮೂಡ್ಯವ್ನೆ ಕ್ಲಾಸಲ್ಲಿ ಮೂಲೆಯ ಬೆಂಚೀಲಿ !
ಮೂಗಿಲಿ ಅಂಗವ್ನೆ!
ಎಂಜಲು ನೋಟ್ಸನ್ನ ಬರಿತವ್ನೆ ಸಾಲಾಗಿ !
ಮೂಗ್ನಂಗೆ ನುಂಗ್ತಾನೆ !

ಮಾರಗಲ ಶ್ವೇತಾಂಬ್ರ ಪೈಜಾಮ ತೊಟ್ಟಾನೆ!
'ಏನಮ್ಮ' ಅಂತಾನೆ !
ತುಟಿಗಳ ಸಂದೀಲಿ ದಸರಾವ ಸಿಗರೇಟು !
ಬುರುಡೆಯ ಬಿಡ್ತಾನೆ

೭

ಶೋಕಿಲಾಲ್ ಜೋಕ್ ಮೇಲೆ ಕ್ರಿಕೆಟ್ ಬ್ಯಾಟ್ ಬೀಸ್ತಾನೆ!
"ಹೌ ಇಸ್ ದಾಟ್" ಕಿರಿಚ್ತಾನೆ !
ನೇವಿಬ್ಲೂ ಗ್ರೇ ಫ್ಲಾನಲ್ ಧರಿಸುತ್ತ ಧಾಂಡಿಗ
ಜಂಭವ ಕೊಚ್ತಾನೆ.

೮

ಭೂಪತಿ ನಿಂತವ್ನೆ ಚೀಟೀನ ಹಂಚ್ತಾನೆ !
ಓಟು ಓಟಂತಾನೆ !
ಸೋತಾಗ ಗೆದ್ದೋರ್ನ ಬಾಯ್ತುಂಬ ಬಯ್ತಾನೆ!
ಬಿಲ್ಲೆಷ್ಟು ? ಅಂತಾನೆ !

೯

ಮಾವನ ಎಂ. ಓ. ನ ಎರಡಕ್ಷ್ರ ಡಿಗ್ರೀಗೆ
ವರ್ಸ್ವರ್ಸ ತೆರ್‍ತಾನೆ !
ಪಾಡ್ಯಾದ ಹಬ್ಬದಲ್ಲಿ ಅತ್ತೆ ಮನೆಗೆ ಹೋಗಿ
ಡಯರಿಯ ತರ್‍ತಾನೆ !

೧೦

ಮಾರಾಯ ಬರ್‍ತಾನೆ ! ಜರಿ ರುಮಾಲ್ ಕಟ್ತಾನೆ !
ಕರಿ ಅಂಗಿ ತೊಡ್ತಾನೆ !
ಬಿರುದನ್ನ ಹಿಡ್ಕೊಂಡು ಗಾಡಿಯಿಂದಿಳಿತಾನೆ !
ಇಡಿ ರೂಪಾಯಿ ಕೊಡ್ತಾನೆ !!

---

# ಸಿಲ್ಕ್ ಸೀರೆ

## (ಕಿರುಘಟನೆ)

ರೇವತಿಯೊಡನೆ ಸಂಸಾರ ಹೂಡಿದಂ. ದೀಚೆಗೆ, ಪ್ರಭು, ಅದೆಷ್ಟೋ ಬಾರಿ ಮುಖಕ್ಕೆ ಮಸಿ ಹಚ್ಚಿಸಿಕೊಂಡಿದ್ದಾನೆ; ಪ್ರತಿಸಲವೂ ರೇವತಿಯದೇ ಗೆಲವು. ನ್ಯಾಯವಿರಲಿ, ಇಲ್ಲದಿರಲಿ ಅವಳದೇ ಮೇಲುಗೈ ಒಂದು ಸಲ ಕಾಫಿಯ ವಿಚಾರದಲ್ಲಿ ಚರ್ಚೆ ಬಂದು, ಯಾರ ಮನೆಯದೋ ಸಮಾಚಾರವನ್ನು, ಅವನ ಸ್ನೇಹಿತನ ಮನೆಯ ಗುಟ್ಟೆಂದು ಹೇಳಿ ದಬಾಯಿಸಿ ತಾನೇ ಗೆದ್ದಳು; ಇದಕ್ಕೆ ಪ್ರಭುವಿಂದ ಹೊಗಳಿಕೆಯೂ ಸಿಕ್ಕಿತು, (Vide 'ಬೆಲ್ಲದ್ಕಾಫಿ' ನವೆಂಬರ್ ಕೊರವಂಜಿ) ಆದರೆ ಇದಕ್ಕಿಂತಲೂ, ಇತರ ಅನೇಕ ವಿಷಯಗಳಲ್ಲಿ ಪ್ರಭು, ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡು ಪೆಚ್ಚಾಗಿದ್ದ, ಇದು ಕಾರಣ, ತಕ್ಕ ಪ್ರತೀಕಾರ ತೆಗೆದುಕೊಳ್ಳಲೇ ಬೇಕೆಂಬ ಹಟದಿಂದ ಅವನ ಮನಸ್ಸು ಕೊರೆಯುತ್ತಿತ್ತು.

ಅಂದು ಭಾನುವಾರ; ಆಗ ತಾನೇ ಊಟ ಮಾಡಿ 'ವರಾಂಡಾ'ದಲ್ಲಿ ಕುರ್ಚಿಯ ಮೇಲೆ ಕುಳಿತು, ಆವತ್ತಿನ ಪತ್ರಿಕೆಯನ್ನು ತಿರುವಿಹಾಕುತ್ತಿದ್ದ, ಪ್ರಭು. ರೇವತಿ ತಾಂಬೂಲದ ಸಿದ್ಧತೆಯಲ್ಲಿ ಒಳಗಿದ್ದಳು. ಆಗ 'ಪೋಸ್ಟಿ'ನವನು ಪ್ರಭುವಿಗೆ ಬಂದಿದ್ದ ಒಂದು ಲಕ್ಕೋಟೆಯನ್ನು ಕೊಟ್ಟು ಹೊರಟುಹೋಗಿದ್ದ—ಆ ಲಕ್ಕೋಟೆಯಲ್ಲಿದ್ದದ್ದು ಒಂದು ಲಗ್ನಪತ್ರಿಕೆ, ಅದರ ಜತೆಯಲ್ಲಿ ಒಂದು ಕಾಗದ, ಅವನಿಗೆ. ರೇವತಿಯೊಡನೆ ಅವನ ಅಕ್ಕನ ಮಗಳ ಮದುವೆಗೆ ಹೊರಟು ಬರಬೇಕೆಂದು ಆಹ್ವಾನ, ಅಕ್ಕ ಭಾವ ಇಬ್ಬರಿಂದ.

ಲಗ್ನಪತ್ರಿಕೆ ನೋಡುತ್ತಿದ್ದಂತೆಯೇ ಪ್ರಭುವಿಗೆ ಏನೋ ಹೊಳೆದಂತಾಗಿ, ಲಕ್ಕೋಟೆಯಲ್ಲಿ ಲಗ್ನಪತ್ರಿಕೆಯನ್ನೂ, ಕಾಗದವನ್ನೂ ಇಟ್ಟು, ಕೋಟಿನಲ್ಲಿ ಭದ್ರಪಡಿಸಿ, ಏನೂ ತಿಳಿಯದವನಂತೆ, ಪುನಃ ಸ್ವಸ್ಥಾನಕ್ಕೆ ಬಂದ. ರೇವತಿಯೂ ತಾಂಬೂಲದ ತಟ್ಟೆ ಸಹಿತ ಬಂದಳು.

"ಹೂಂ!....ತೊಗೋಳ್ಳಿಂದ್ರೆ" ರೇವತಿ ಹೇಳಿದಳು.

"ಸರಿ, ಇದೇನೇ ಇದೂ? ಎಲೆ ಹೀಗಿದೇ, ಇಷ್ಟು ಕಪ್ಪೇ?"

"ಇನ್ಹ್ಯಾಗಿರುತ್ತೆ ಹೇಳಿಂದ್ರೆ? ನೀವು ಕಟ್ಟು ಕಟ್ಟೇ ತಂದ್ಹಾಕ್ತಿದ್ದೀರಿ ಮೈಸೂರು ಎಲೆನಾ. ಅದಕ್ಕೆ ಹೀಗಿರೋದು ಈ ಎಲೆ ಒಂದ್ ಎಲೇ ಅಡ್ಕೇಗೂ ನಾನೇ ಹೋಗ್ಬೇಕೆಲ್ಲಾ? ಅಲ್ಲಾ, ತರಿಸ್ಬೇಕಲ್ಲಾ? ಗಂಡ್ಸೂನಿಸ್ಕೊಂಡು ಈ ಚಿಕ್ಕ ಕೆಲ್ಸಾನ್ನೂ ಮಾಡ್ಕೋಡದೂಂತ ಹೇಳಿದ್ಯೇನೋ?.... ಮತ್ತೇ........"

"ಸಾಕ್ಸಾಕ್ನಿಲ್ಸು.... ಮಾತ್ನಾಡೋಕಿಲ್ಲ ಆಗ್ಲೆ ಸುರಿಯುತ್ತೆ ಬಾಯಿಂದ, ಅನೆಕಲ್ಲ್ಲೇ ಸುರಿದ್ಹಾಗೆ. ಅಬ್ಬಾ....ಅದ್ಸರಿ ಕಾಣೇ ಅವತ್ತೇನೋ ಹೇಳಿದ್ಯಲ್ಲಾ ಸೀರೆವಿಚಾರ ........"

"ಅದೇ! ಮೈಸೂರ್ ಸಿಲ್ಕ್ ಸೀರೇನೆಂದ್ರೆ? ಬಿಸ್ಕತ್ ಕಲರ್‌ದು. ವೆಲ್‌ವೆಟ್ ಬಾರ್ಡರ್ಡ್ (Velvet bordered).... ಎಷ್ಟು ಬಡ್ಕೊಂಡ್ರೂ ನೀವೇನಾ ಸೀರೆ ತರೋಹಾಗಿಲ್ಲ ನಾನುಡೋಹಾಗಿಲ್ಲ ಅಷ್ಟೆ ತಾನೇ"

"ಅಲ್ಲೇ; ಆ ಸೀರೇನ ಇವತ್ನೋಡ್ದೆ ಅಂಗಡೀಲಿ. ಏನೋ ಕೊಂಡ್ಕೊಳ್ಳೋಣಾನ್ನಿಸ್ತು. ಆದ್ರೆ ನಿನ್ನೂ ಜತೇಲೇ ಕರ್ಕೊಂಡು ಹೋಗಿ, ಸರಿಯಾದ್ದು ಹುಡುಕಿ ತೆಗೆದುಕೊಳ್ಳೋಣಾಂತಂದ್ಕೊಂಡೆ; ಅದಕ್ಕೆ ಕೇಳಿದ್ದು ಅಷ್ಟೆ."

"ಹೋ....T h a n k s ಊಂದ್ರೆ. Thanks ಉ....ನೀವೆಷ್ಟೊಳ್ಳೆಯೋರೂಂದ್ರೆ....ಅಂತೂ ನನ್ನ ಪಲ ಇವತ್ತ್ಪೂರ್ತಿಯಾಗುತ್ತೇಂತ್ಕಾಣತ್ತೆ....ಆ ಸೀರೆ, ಒಂದ್ಸಂದು ಮುಬ್ಕೊಂಡು ಆನಂದ್ಪಟ್ಟಿಟ್ರೆ, ಇನ್ನಾರು ತಿಂಗಳು ಸೀರೆ ಸುದ್ದಿಯನ್ನೇ ಎತ್ತೊಲ್ಲ....ನೋಡಿದ್ರೇಕೋ ಅನುಮಾನಾಂದ್ರೆ ....ದುಡ್ಡಿಲ್ಲಾಂತಿದ್ರಿ.... ಈಗೆಲ್ಲಿಂದ್ಕೊಡ್ತೀರಿ ಸೀರೇನ?....ನನ್ನನ್ನು ಸುಮ್ನೆ ಆಶೆ ಪಡ್ಸಿ........"

"ನೋಡ್ತೀರೋ, ಸೀರೇ ತರ್ತೀನೋ ಇಲ್ವೊ....ನಿನ್ನೆ ಕೃಷ್ಣಪ್ಪಯ್ಯ ಸಿಕ್ಕಿದ್ದ.... ಒಂದರವತ್ರೂಪಾಯಿ ಸಾಲ ಕೇಳಿದ್ದೆ.... ಕೊಟ್ಬಿಟ್ಟ....ಇನ್ನೊಂದ್ವಾರದಲ್ಲೇ ತಿರುಗ್ಕೊಡ್ತೀನೀಂತ, ತಂದೇನು.... ಹಾಗೇನೇ ಸಿನಿಮಾ ಪ್ರೋಗ್ರಾಂ ಬೇರೆ ಇಟ್ಟಿದ್ದೀನ್ಕಣೆ...."

"ಓಹೋ! ಪರ್ವಾಗಿಲ್ಲಾಂದ್ರೆ....ದೇವ್ರಿಗೆಲ್ಲೋ ನನ್ಮೇಲೆ ದಯ ಬಂದ್ಹಾಗಿದೆ..... ಇವತ್ನಾನ್ನರೀಮುಖಾನ್ನೋಡಿರಬೇಕು.... ಇಲ್ಲ ನನಗೆ ಶುಕ್ರದೆಸೆ ಒದಗಿದ್ಯೋ ಏನೋ....ಹಾಗೇನೇ ಲಲಿತಳ ಮನೆಗ್ಹೋಗೋಕಾಗುತ್ಯೇಂದ್ರೆ?"

"ಬೇಗೇಳು.... ಆಗ್ಲೇ ಒಂದು ಗಂಟೆ ಆಗ್ತಾ ಬಂತು..... ನೀನೇಳೋದೆತಡ.... ಅಂಗಡಿಗ್ಹೋಗಿ ಸೀರೆ ತೊಗೊಂಡು.... ಮ್ಯಾಟ್ನಿಗ್ಹೋಗೋಗೂಕೂ 'ಟೈಂ' ಆಗ್ಬಿಟ್ಟೇತು...."

"ಇಗೊಳ್ಳಿಂದ್ರೆ; ಇನ್ನೇನ್ 'ರೆಡಿ' ಯಾದೇನ್ನಿ, ನೀವೇಳೋಷ್ಟೊತ್ತಿಗೆ ನಾನೂನು."

* * *

ಜವಳಿ ಅಂಗಡಿಗೆ ಪ್ರಭು ರೇವತಿಯೊಡನೆ ಬಂದ. ಅಲ್ಲಿ ಸುಮಾರು ಒಂದು ಒಂದೂವರೆ ಗಂಟೆ ಕಾಲ, ಸೀರೆಗಳನ್ನಾರಿಸುವುದರಲ್ಲೇ ಕಳೆದರು. ಅಲ್ಲಿಯೂ ಅವಳ ವಾಕ್ಸರಣಿ ಕಮ್ಮಿಯಾಗಿರಲಿಲ್ಲ.

"ಇಗೋ ನೋಡೀಂದ್ರೆ, ನಾ ಹೇಳಿದ್ದಕ್ಕಿಂತ ಈ ಊದಾ ಸೀರೇ ಚೆನ್ನಾಗಿದೆ. ಇದೇ ಇರ್ಲಿ. ವ್ಯಾಪಾರ ಮಾಡಿ."

"ಥೂ, ಬೇಡ್ವೇ ಅದು? ಅದು ವಿಪ್ರೀತ (Gaudy) ನಂಗೆ ಆ ಕಲರ್ ಚೆನ್ನಿಲ್ಲ ಕಣೆ."

"ನೀವೇನಲ್ಲಾ ಅದನ್ನುಟ್ಕೊಂಬೋರು, ನಾನು."

"ಇಲ್ಲೇನೂ ನಿನ್ನ ಪುರಾಣ ಬೇಡ. ಆ ಕಲರ್ ನಂಗೊಪ್ಪಿಲ್ಲ. 'ಲೈಟ್ ರೋಸ್' (Light Rose) ತೆಗೊಳ್ಳೋಣ ಸುಮ್ನಿರು."

"ನಂಗದೊಪ್ಪೊಲ್ಲ, ಬೇಡಿ. ನಂಗಿಷ್ಟವಿಲ್ಲ. ಅದು 'ರೋಸ್" ಬೇಡ. ಈ sky colour ಚೆನ್ನಾಗಿದೆ ಕಾಣೆ. ಅದೂ ಅಲ್ದೆ ಬೆಲೆಯೂ ಕಮ್ಮಿ."

"ನನ್ಹತ್ರ ಆ ಮೋಘ ವರ್ಣ ಇದೇಂದ್ರೆ ....ಬೇಡಾ....ಬೇಡಾಂತಂದ್ರೂ ಕಟ್ಟಿಸ್ತೀರಲ್ಲ....."

"ನಿನ್ಹತ್ರ ಇದ್ರೆಇರ್ಲಿ....ನಂಗಿದೇನೋ ಬಹಳ ಚೆನ್ನ."

"ಇರೋದ್ರ ಜತೇಗಿನ್ನೊಂದೇನೂ? ನಿಮ್ಮಿಷ್ಟದ ಪ್ರಕಾರವೇ. ಆ 'ರೋಸ್' ತೊಗೊಳ್ಳಿ."

"ಇಲ್ಲ, 'ರೋಸ್'ಗಿಂತ ಇದೇ fine ಆಗಿದೆ.... ಎಂದು ಪ್ರಭು ಅಂಗಡಿಯವನಿಗೆ ಅದನ್ನೂ, ಅದರ ಜತೆಗೆ ಅದೇ ರಂಗಿನ ಒಂದು ಗಜ ಸಿಲ್ಕನ್ನೂ ಕಟ್ಟುವಂತೆ ಹೇಳಿ ಸೀರೆಯನ್ನು ತೆಗೆದುಕೊಂಡು, ರೇವತಿ ಯೊಡನೆ ಅಂಗಡಿಯಿಂದ ಹೊರಬಿದ್ದ; ರೇವತಿಯ ಮುಖ ಪೆಚ್ಚು ಬಿದ್ದಿತು.

ಅಷ್ಟು ಹೊತ್ತಿಗೆ ನಾಲ್ಕು ಗಂಟೆಯ ಮೇಲಾಗಿತ್ತು. ಇನ್ನೆಲ್ಲಿಯ ಮ್ಯಾಟ್ನಿ? ಸಿನಿಮಾ ಪ್ರೋಗ್ರ್ಯಾಮು ನೆಗೆದುಬಿತ್ತು.

"ಸಿನಿಮಾಕ್ಹೋಗೋಣಾಂತ ಅಂದಿ ದ್ರಲ್ಲಾ?"

ಆಗ್ಲೇ ಷುರುವಾಗಿಬಿಟ್ಟದೆ ಕಾಣೆ, ಇನ್ನೊಂದಿನ ಆಗ್ಲಿ."

"ಇಲ್ಲಾಂದ್ರೆ, ಇಲ್ಲೇ ಗಾಂಧಿ ನಗರ ದಲ್ಲಿ ನನ್ನ friend ಲಲಿತಾ ಇದ್ದಾಳೆಂದ್ರೆ, ಅವಳ್ಮನೇಗ್ಹೊರ್ಟ್ಕೊಂಡೋಗೀಂದ್ರೆ, ಸಾಯಂ ಕಾಲದ ವರ್ಗೂ ಅಲ್ಲೇ ಇದ್ದು ಆರು ಗಂಟೆ ಆಟಕ್ಹೋಗೋಣ ಸಿನಿಮಾಕ್ಕೆ.

"ಉಹು ಆಗೊಲ್ಲ. ಎನ್ನೀನು ಹೇಳೋ ದು? ನಿನ್ನ friend ಮನೇಗ್ನಾನ್ಯಕರ್ಕೊಂ ಡ್ಹೋಗಿ, ನೀನು ಬರೋವರ್ಗೂ ಇಲ್ಲಿ ಲ್ಲಾದ್ರೂ ಬಿಸ್ಲಲ್ಲಿ ತಿರುಗುತ್ತಾ ಇರ್ಬೇ ಕೊನ್ನು....ಆಗೋದೇ ಇಲ್ಲ."

"ಯಾಕೆಂದ್ರೆ, ಲಲಿತ ರಘುನಾಥ ರಾವ್ ಹೆಂಡತಿ. ನೀವೇ ಹೇಳಿರ್ಲಿಲ್ವೇ, 'ರಘು ನನ್ನ pet friendಊ'ಂತ ಅವ ರ್ಮನೇಗ್ನೀವೂ ಬನ್ನಿ. ನೀವೇನೂ ಬಿಸ್ಲಲ್ಲಿ ಸುತ್ಬೇಕಾದ್ದಿಲ್ಲ, ಹೇಗಿದ್ರೂ ಭಾನುವಾರ. ಮನೇಲಿರ್ತಾರೆ ನಿಮ್ಮ್ನೇಹಿತ್ರು ಕೂಡ."

"ನಾನು ಆಗೋಲ್ಲಾಂದ್ಮೇಲ್ಮುಗೀತು. ತಿರುಗಿ ಮಾತ್ನಾಡಿಯೇ."

"ಯಾಕ್ರೇಗ್ತೀರಿ? ನಾನೀವತ್ತೆಲ್ಲೋ ಬೆಕ್ಕಿನ್ಮುಖ ನೋಡೆದ್ದಿರ್ಬೇಕು....ಮನೇ ಗ್ಹಾನೇ ಈಗ್ಹೋಗೋದು? ದೊರೆಯು ದ್ನೆಲ್ಲಾ ಬಯಸಿದ್ರೇನ್ಫಲ?"

ಇಲ್ಲಿಗೆ ರೇವತಿ ಮುಕ್ಕಾಲು ಹಣ್ಣಾಗಿ ದ್ದಳು. ಆದರೆ ಮುಖ್ಯವಾದ ಬಲವಾದ ಪೆಟ್ಟು ಇನ್ನೂ ಬಿದ್ದಿರಲಿಲ್ಲ.

ಮನೆಗೆ ಬಂದರು. ಸರಿ, ಮತ್ತೆ ಪ್ರಾರಂಭ ಇಬ್ಬರಿಗೂ ವಾಗ್ವಾದ. ರೇವತಿಯ ವಾಪ ಸರಣಿ ಮುಗಿಲನ್ನೇ ಉರುಳಿಸುವಂತಿತ್ತು. —"ಇಷ್ಟನ್ಯಾಯ ಇರಬಾರದು ಗಂಡಸ ರಿಗೆ. ಇವತ್ನಿಮ್ಮ ಸಂಗಡ ಪೇಟೆಗ್ಬಂದಪ್ಲೇ ಮೊದಲ್ತಪ್ಪು, ನಂದು....ಬೇಡ ಬೇಡಾಂ ತಂದ್ರೂ ನನಗೊಲ್ಲದ ಸೀರೆಯನ್ನೇ ಕೊಂ ಡ್ಕೊಂಡಿದ್ದೀರಲ್ಲಾ.... ಇಷ್ಟಕ್ಕೂ ನನ್ಮಾ ತೇನು ಈ ಮನೇಲಿ? ಮನೇಲಿರೋ ಕಲ್ಗೆ ತಂದ್ರೆ ದಂಡ್ವಾಗೋಲ್ವೇ ಹೇಳಿ?"

"ಯಾಕ್ಸುಮ್ನೆ ಕೂಗಾಡ್ತೀ? ಈಗ್ತಂ ದಿರೋ ಸೀರೆ ನಿಂಗೇಂತ ತಿಳ್ಕೊಂಡೇನು? ಪ್ರಭು ಕೇಳಿದ.?

ಇದು ಅವಳ ಕಿವಿಗೆ ಬೀಳಲಿಲ್ಲವೆಂದು ಕಾಣುತ್ತೆ.

“....ನನ್ನ friend ಲಲಿತಾನ್ರಾದ್ರೂ **ನೋಡ್ಕೊಂಡ್ಬ**ರಬಹುದೆಂದೂಂತಿದ್ದೆ. ಹೋಗ್ಲಿ, ಸಿನಿಮಾ ಆಶೆ ಹುಟ್ಟಿಸಿ ಅದಕ್ಕೂ ಕಲ್ಸಾಕ್ಲಿಟ್ರಲ್ಲಾ....ಅದೇನೋ ಇವತ್ನ ಸೀರೆ ಬೇಕೂಂತ್ಲೋ ಹಟ ತೀರಿಸ್ಕೊಂಡಿರೋ ಹಾಗಿದೆ.”

“ನಾ ಹೇಳೋದ್ನ ಕೇಳಿ....ಈಗ್ಗಂದಿ ಟ್ರ, ಸೀರೆ ನಿಂಗೇಂತ ಭಾವಿಸ್ಕೊಂಡಿದ್ದೀಯಾ ಇನ್ನೂನು.”

“ಆ ಸೀರೆ....ಏನೂ?”

“ಆ ಸೀರೆ ನಿಂಗಲ್ಲ. ನಮ್ಮಕ್ಕನ ಮಗಳ ಮದುವೆ ಅವಳಿಗೊದ್ನೋಕೆ”

“ಯಾಕೀ ಡೋಂಗೀ........ಲಗ್ನಪತ್ರಿಕೇನೇ ಬರ್ಲಿಲ್ಲ”

“ಕೋಟ್ನಲ್ಲಿದೆ ನೋಡು ತೆಗೆದು ಬೇಕಾದ್ರೆ”

“ನಿಜವಾಗಿಯೂ ನಂಗಲ್ವೇಂದ್ರೆ ಈ ಸೀರೆ”

“ಖಂಡಿತ ಅಲ್ಲ.”

“ಮತ್ಯಾರ್ಗೆ?”

“ನಮ್ಮ ಅಕ್ಕನ ಮಗಳು ಸೀತೂಗೆ”

“ಆ್ಞ”

“ಹೂ.”

—ನಾ. ಪಂ.

---

ನ್ಯಾ. ವಿ. ಸಭೆಯಲ್ಲಿ ಒಂದು ದಿನ ನಿದ್ರೆ ಬಂದೇಬಿಡುತಿತ್ತು ಎಂದು ಸದಸ್ಯರೊಬ್ಬರ ವರದಿ.

—ಮುಂದಿನ ಅಧಿವೇಶನದಲ್ಲಿ ಅವರಿಗೆ ಜಯವುಂಟಾಗಲಿ ಅಭೀಷ್ಟ ಸಿದ್ಧಿಸಲಿ—

* * *

ಕೆಲವು ದಿನಗಳಿಂದ ಬಂಗಾಳಾಕೊಲ್ಲಿಯ ಚಂಡಮಾರುತದ ದೆಸೆಯಿಂದ ಊರಲೆಲ್ಲಾ ತುಂಬಾ ಮಳೆಯಾಯಿತಂತೆ.

—ಆ ಕಾರಣದಿಂದ ನಮ್ಮೂರಿನ ಛತ್ರಿಗಳೆಲ್ಲವೂ ಹಾಳಾದುವಂತೆ—

* * *

ತನ್ನಷ್ಟಕ್ಕೆ ತಾನೇ ನಡೆಯುವ ಮೋಟಾರೊಂದು ನಿರ್ಮಿಸಲ್ಪಟ್ಟಿದೆಯಂತೆ—

—ಇದೇನು ಹೊಸ ಸುದ್ದಿ ಅಲ್ಲ—ಮೊನ್ನೆ ನಮ್ಮನ್ನಟ್ಟಿಸಿಕೊಂಡು ಬಂದು, ದಾರಿಗಂಬವನ್ನು ಹತ್ತಿದ ಮೋಟಾರೂ ತನ್ನಷ್ಟಕ್ಕೆ ತಾನೇ ನಡೆಯುತ್ತಿತ್ತು, ಎಂದು ಮೋಟಾರಿನವನು ಹೇಳಿದ.

* * *

ಹಾಸ್ಟಲೊಂದರಲ್ಲಿ ಕಳ್ಳತನ ಮಾಡುತ್ತಿದ್ದ ಕಳ್ಳರಿಬ್ಬರು, ಬೆಳಗಿನ ಝಾಮ ನಾಲ್ಕು ಗಂಟೆಯ ಹೊತ್ತಿನಲ್ಲಿ ಎದ್ದು ಓದಲಾರಂಭಿಸಿದ ಹುಡುಗನೊಬ್ಬನನ್ನು ನೋಡಿ ಸ್ತಂಭೀಭೂತರಾದರಂತೆ.

—ನಾಲ್ಕು ಗಂಟೆಗೆ ಎದ್ದು ಓದುವ ಹಾಸ್ಟಲ ವಿದ್ಯಾರ್ಥಿಯನ್ನು ನೋಡಿದರೆ ಯಾರಾದರೂ ಸ್ತಂಭೀಭೂತರಾಗುವುದೇ—

# “ಜೇನು ಷಿಕಾರಿ”

ಜಪಾನೀಯರ ಹಾವಳಿ ಅಷ್ಟಿಷ್ಟಲ್ಲ. ಎದ್ದು ಬಂದು ಯುದ್ಧವನ್ನೂ ಮಾಡುವುದಿಲ್ಲ. ಬಿದ್ದುಕೊಂಡು ಸುಮ್ಮನೇನೂ ಇರುವುದಿಲ್ಲ. ಬಂದೇ ಬಂದೇ ಎಂದು ನಾಟಕದ ಕಂಪನಿಯವರಂತೆ ಜಾಹೀರಾತು ಕೂಗಿಸುತ್ತಾರೆ. ನಾವುಗಳೂ ಊರ ಬಿಟ್ಟು ಹಳ್ಳಿಗೆ ಹೋಗುವುದಕ್ಕೆ ಸಿದ್ಧ ಮಾಡಿಕೊಂಡರೆ ಈ ಕಡೆ ತಿರಿಗಿಯೂ ನೋಡುವುದಿಲ್ಲ. ಓದು ಬರಹಕ್ಕೆ ಸಂಸಾರಕ್ಕೆ ಈ ದೆಸೆಯಿಂದ ತುಂಬಾ ಕಷ್ಟವಾಗಿದೆ. ಇದನ್ನು ನಿವಾರಿಸಲು ನಾನೊಂದು ಉಪಾಯ ಹೂಡಿದೆ. ಹಳ್ಳಿಯೊಂದರಲ್ಲಿ ಸಂಸಾರ ಸ್ಥಾಪಿಸುವುದು. ಅಲ್ಲಿಯೇ ಹುಡುಗರು ಮಕ್ಕಳೆಲ್ಲಾ ಓದಿಕೊಳ್ಳುವುದು. ನಾನು ಷಹರಿನಲ್ಲಿ ನೆಮ್ಮದಿಯಾಗಿರುವುದು. ವಾರಕ್ಕೊಂದಾವರ್ತಿ ಅಗಸರವನು ಮನೆಗೆ ಬಂದಂತೆ ನಾನೂ ಹಳ್ಳಿಗೆ ಹೋಗುವುದು. ಒಂದೆರಡು ದಿನ ಅಲ್ಲಿದ್ದು ಹಿಂತಿರುಗಿ ಷಹರಿಗೆ ಬರುವುದು. ಇದನ್ನೂ ಯುದ್ಧ ಮುಗಿಯುವ ತನಕ ನಡೆಸಬೇಕೆಂದು ಸ್ಥಿರ ಮಾಡಿದೆ.

ನಮ್ಮೂರಿಗೆ ಹತ್ತಿರವೇ ಇರುವ ಹಳ್ಳಿಯೊಂದರ ಪಟೇಲನು ನನ್ನ ಸ್ನೇಹಿತ. ಅವನ ಸಹಾಯದಿಂದ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡೆ. ತಿಂಗಳಿಗೆ ಇಪ್ಪತ್ತು ರೂಪಾಯಿ. ಇದೇನಯ್ಯಾ! ಹಳ್ಳಿ ಮನೆಯನ್ನು ಕೊಂಡುಕೊಂಡೆಯಾ ಎಂದು ಕೇಳಬೇಡಿ. ಯುದ್ಧವು ಹಳ್ಳಿ ಹಳ್ಳಿಗೂ ವ್ಯಾಪಿಸಿದೆ. ದಿಳ್ಳಿಯಿಂದ ಯುದ್ಧದ ಸುದ್ದಿ ಬರುತ್ತದೆ. ಹಳ್ಳಿಯಲ್ಲಿ ಯುದ್ಧ ಅನುಭವಿಸುತ್ತಾರೆ ಅಷ್ಟೆ. ಹಾಗಾಗಿ ಬಾಡಿಗೆಯೆಲ್ಲಾ ಏರಿ ಹೋಗಿದೆ. ಬಾಡಿಗೆ ಮನೆಗೆ ಸುಣ್ಣ ಬಳಿಸಿ ನೆಲ ಸಾರಿಸಿ ರಂಗೋಲಿ ಇಟ್ಟು ಸಂಸಾರ ಸ್ಥಾಪಿಸಿದೆ. ಷಹರಿಗೆ ಹಿಂತಿರುಗಿದೆ.

ಮುಂದಿನ ತಿಂಗಳೆಲ್ಲಾ ತುಂಬಾ ಕೆಲಸಹಾದುದರಿಂದ ಹಳ್ಳಿಗೆ ಹೋಗಲು ಆಗಲೇ ಇಲ್ಲ. ಹಣವನ್ನೇನೋ ಕಳುಹಿಸುತ್ತಿದ್ದೆ. ನಾನು ಹೋಗಲು ಕ್ರಿಸ್‌ಮಸ್ ರಜಕ್ಕೆ ಕಾಯುವಂತಾಯಿತು. ಕ್ರಿಸ್‌ಮಸ್ ರಜಕ್ಕೆ ಹಳ್ಳಿಗೆ ಹೋದೆ. ಹೋದ ಕೂಡಲೇ ಮಡದಿ ಮಕ್ಕಳೆಲ್ಲಾ ಒಟ್ಟಿಗೇ ದೂರು ಹೇಳಲಾರಂಭಿಸಿದರು. ಮನೆಯ ಹಿತ್ತಲಲ್ಲಿ ಹುಣಿಸೆಮರವಿದೆಯಂತೆ. ಅದರಲ್ಲಿ ಜೇನು ಗೂಡು ಕಟ್ಟಿದೆಯಂತೆ. ಜೇನು ಹುಳುಗಳು ಹಗಲೂ ರಾತ್ರಿ ಮನೆಯ ಸುತ್ತಲೂ ಹಾರಾಡುತ್ತಂತೆ. ಹೊರಗೆ ಹೋಗಿ ಬರಲೂ ಯಾರಿಗೂ ಸಾಧ್ಯವಿಲ್ಲವಂತೆ. ಜೇನು ಗೂಡನ್ನು ಕಿತ್ತು ಹಾಕಿ ಆ ಮೇಲೆಯೇ ನಾನು ಊರಿಗೆ ಹೋಗಬೇಕಂತೆ. ಸಾವಧಾನವಾಗಿ ಎಲ್ಲವನ್ನೂ ಕೇಳಿದೆ. ಅದೇನು ಮಹಾ ಕಾರ್ಯ ಮಾಡುತ್ತೇನೆ ಎಂದು ಧೈರ್ಯ ಹೇಳಿ ಊಟ ಮಾಡಿ ಮಲಗಿದೆ.

ಮರುದಿನ ಬೆಳಗಾಯಿತು. ಮನೆಯವರೆಲ್ಲಾ ಹಿಂದಿನ ರಾತ್ರಿಯ ಸಂಭಾಷಣೆಯನ್ನು ನೆನಪಿಗೆ ತಂದರು. ನನಗೆ ಜೇನು ಗೂಡನ್ನು ಕೀಳುವುದರ ವಿಚಾರ ಏನೂ ತಿಳಿಯದು. ಪಕ್ಷಿಗಳ ಗೂಡಿನಂತೆ ಕೈಯಿಂದ ಕೀಳಲು ಆಗುವುದಿಲ್ಲ. ದೋಟಿಯಿಂದ ಉರುಳಿಸಲು ಸಾಧ್ಯವಿಲ್ಲ. ಮರದ ಹತ್ತಿರ ಹೋಗಿ ನೋಡಿದೆ. ಮುರ್ರೋ ಎಂಬ ಶಬ್ದವು ಕೇಳಿಬಂತು. ಓಹೋ! ಜಪಾನೀ ವಿಮಾನ ಎಂದೆಂದು ತಲೆ ಎತ್ತಿ ನೋಡಿದೆ. ಎಲ್ಲೂ ಏನೂ ಇಲ್ಲ. ಅಷ್ಟರಲ್ಲೇ ಜೇನಿನ ಹುಳವೊಂದು ಹಾರಾಡುತ್ತಾ ಬಂದು ಗೂಡನ್ನು ಸೇರಿತು.

ಇಷ್ಟು ಆರ್ಭಟ ಮಾಡುವ ಗೂಡನ್ನು ಹೇಗೆ ಕೀಳುವುದು ಎಂದು ಯೋಚಿಸತೊಡಗಿದೆ. ಕರಡಿಯನ್ನಾದರೂ ಸಾಕಿದ್ದರೆ ಅದು ಜೇನುತುಪ್ಪದ ಆಸೆಗಾಗಿಯಾದರೂ ಜೇನನ್ನು ಓಡಿಸುತ್ತಿತ್ತಲ್ಲಾ ಎಂದು ಕೊರಗಿದೆ. ಕಡೆಗೆ ಪಟ್ಟಣ ವಾಸಿಗಳು ನಮಗೆ ಇದು ತಿಳಿಯುವುದಿಲ್ಲ. ಹಳ್ಳಿಯವರನ್ನು ಸಲಹೆ ಕೇಳಿದರೆ ಹೇಳುತ್ತಾರೆ ಎಂದು ಪಟೇಲನ ಹತ್ತಿರ ಹೋಗಿ ಹೇಳಿಕೊಂಡೆ. ಅವನು ಮಧ್ಯಾಹ್ನ ನಾನು ಬಂದು ಓಡಿಸುತ್ತೇನೆ ಎಂದ. ಸರಿ ಮಧ್ಯಾಹ್ನ ಬಂದ. ದೊಡ್ಡ ಕೋಲಿಗೆ ಹಳೆಯ ಬಟ್ಟೆಯ ರುಮಾಲು ಸುತ್ತಿದ. ಅದಕ್ಕೆ ಒಂದಿಷ್ಟು ಸೀಮೆಯೆಣ್ಣೆ ಸುರಿದ. ಬೆಂಕಿ ಹತ್ತಿಸಿ ಆ ಕೋಲನ್ನ ಮರದ ಹತ್ತಿರ ತೆಗೆದುಕೊಂಡು ಧೈರ್ಯವಾಗಿ ಹೋದ. ಜೇನುಗೂಡಿನ ಕೆಳಕ್ಕೆ ಸರಿಯಾಗಿ ಅದನ್ನು ಹಿಡಿದು ನಿಂತ. ನಾನೂ ಮುಂಜಾಗ್ರತಾ ಕ್ರಮವನ್ನನುಸರಿಸಿ ಮನೆ ಹೊಕ್ಕು ಕಿಟಕಿ ಬಾಗಿಲುಗಳನ್ನೆಲ್ಲಾ ಭದ್ರವಾಗಿಹಾಕಿ ಕಿಟಕಿ ಕಂಡಿಯಿಂದ ಈ ಘಾಳಿಯನ್ನು ನೋಡುತ್ತಾ ನಿಂತೆ.

ಆ ಹೊಗೆಯು ಜೇನುಗೂಡಿಗೆ ತಗಲಿತೋ ಇಲ್ಲವೋ ನೋಡಿ. ಒಮ್ಮೆಲೇ ಜೇನುಗಳೆಲ್ಲವೂ ಘುಂಗುಟ್ಟುತ್ತ ಒಟ್ಟಿಗೇ ಹೊರಬಿದ್ದುವು. ಹಾಳಾಗಿ ಹೋದವು ಎಂದು ಅನ್ನುವಷ್ಟರಲ್ಲೇ ನೇರನೆ ಪಟೇಲನ ಮುಖದ ಹತ್ತಿರ ತಂಡತಂಡವಾಗಿ ಹಾರಿ ಬರಲಾರಂಭಿಸಿದವು. ಪಟೇಲನೂ ಆ ಹೋರಾಟವನ್ನು ತಪ್ಪಿಸಿಕೊಳ್ಳಲು ಬೆಂಕಿಯಿದ್ದ ಕೋಲಿನ ತುದಿಯನ್ನು ಮುಖದ ಹತ್ತಿರಕ್ಕೆ ತಂದುಕೊಂಡ. ಉತ್ಸವದ ದೇವರಿಗೆ ಚಾಮರ ಹಾಕುವಂತೆ ತನ್ನ ಮುಖಕ್ಕೆ ಆ ಬೆಂಕಿಯ ಕೋಲಿನಿಂದ ಚಾಮರ ಹಾಕಿಕೊಳ್ಳಲಾರಂಭಿಸಿದ. ಹೊರವಾಗಿ ಬೆಳೆಸಿದ್ದ ಮೀಸೆಗೂ ಬೆಂಕಿ ತಗುಲಿರಬೇಕು. ಏಕೆಂದರೆ ಅಯ್ಯೋ ಅಯ್ಯೋ ಎನ್ನುತ್ತ ಹತ್ತಿರಲೇ ಇದ್ದ ಕೊಳದ ಕಡೆಗೆ ಓಡಿದ. ಅವನ ಹಿಂದೂ ಮುಂದೂ ಜೇನಿನ ಮೋಡ ಮೋಡವೇ ಹಾರಾಡುತ್ತಿತ್ತು. ಇದರ ಗೋಳು ತಪ್ಪಿಸಿಕೊಳ್ಳಲು ಆತ್ಮಹತ್ಯ ಮಾಡಿಕೊಳ್ಳುತ್ತಾನೋ ಎಂದು ಕಿಟಕಿ ತೆಗೆದು ನೋಡುತ್ತಾ ನಿಂತೆ. ನೇರನೆ ಓಡಿ ಕೊಳಕ್ಕೆ ಬಿದ್ದ. ಮೂಗು ಮಾತ್ರ ನೀರಿನ ಮೇಲೆ ಬಿಟ್ಟುಕೊಂಡು ದುರ್ಯೋಧನನಂತೆ ಕೊಳದ ವಾಸಿಯಾದ. ಅರ್ಧ ಗಂಟೆ ಆದ ಮೇಲೆ, ಜೇನುಗಳೆಲ್ಲವೂ ಹೋದ ಮೇಲೆ ತೊಡೆ ತಟ್ಟುತ್ತಾ ಎದ್ದು ಬಂದ. ಮನೆಗೆ ಬಂದ. ರಾಯರೇ ಜೇನನ್ನೆಲ್ಲಾ ಓಡಿಸಿದ್ದೇನೆ. ನೀವು ಧೈರ್ಯವಾಗಿ ಓಡಾಡಬಹುದು ಎಂದ. ಹಳ್ಳಿಯವರಿಗೆಲ್ಲಾ ಈ ಕೆಲಸ ಸುಲಭವೆಂದು ಕೊಚ್ಚಿಕೊಂಡ. ಮಾತನಾಡುತ್ತಾ ಆಡುತ್ತಾ ಮೀಸೆಗೆ ಕೈ ಹಾಕಿದ. ಬೂದಿ ಬೂದಿಯಾಗಿ ಅರ್ಧ ಮೀಸೆ ಕೈಗೆ ಬಂತು. ನನ್ನನ್ನು ನೋಡಿದ. ನಗುವನ್ನು ತಡೆಯುತ್ತಿದ್ದ ನಾನೂ ನೋಡಿದೆ.

ಇದೇನು ಮಹಾರಾಯರೇ! ಮೀಸೆ ಬೂದಿಯಾದಕ್ಷಣ ತಿರುಗಿ ಬೆಳೆಯುವುದಿಲ್ಲವೇ ಎಂದ.

ಕೆಳಗೆ ಬಿದ್ದರೂ ಮೀಸೆ ಮಣ್ಣಾಗದೇ ಇರುವುದನ್ನು ಕೇಳಿದ್ದೆ. ಆದರೆ ಹೀಗೆ ಹೋದ ಮೀಸೆ ಬೂದಿಯಾದ್ದನ್ನು ನೋಡುವಂತಾಯಿತು.

---

# "ಯಂತ್ರಾಹುತಿ"

ಮಲೆನಾಡಿನ ಕೆಲವು ಮನೆಗಳಲ್ಲಿ ಕೆಲವು ಹೆಂಗಸರು "ಮದ್ದು ಹಾಕುವುವನ್ನು" ಅಭ್ಯಾಸ ಮಾಡಿರುತ್ತಾರಂತೆ. ಇವರುಗಳು ಪೌರ್ಣಿಮೆಯ ದಿನ ಯಾರಿಗಾದರೂ ಮದ್ದು ಹಾಕಲೇಬೇಕಂತೆ. ಹಾಗೆ ಅವರೇನಾದರೂ ಹಾಕದಿದ್ದರೆ ಅವರು ಕಲಿತ ವಿದ್ಯೆಯು ಅವರ ಮೇಲೆ ತಿರುಗಿ ಬೀಳುತ್ತದಂತೆ. ಹಾಗಾಗಿ ಅವರು ಊಟಕ್ಕೆ ಕೂತರೆ ಅನ್ನದಗುಳೆಲ್ಲಾ ಹುಳುವಂತೆ ಅವರ ಕಣ್ಣುಗಳಿಗೆ ಕಾಣಿಸುವುದಂತೆ. ಕಡೆಗೆ ಅವರು ಉಪವಾಸವಿದ್ದು ಸಾಯಲೇಬೇಕಂತೆ. ಇದನ್ನು ನಿವಾರಿಸಿಕೊಳ್ಳಲು, ಒಮ್ಮೆ ವಿದ್ಯೆಯನ್ನು ಕಲಿತರೆ, ಉಪಾಯವೇ ಇಲ್ಲವಂತೆ.

ಇದನ್ನು ಯಾಕೆ ಹೇಳುಕ್ಕೆ ಬಂದೆ ಎಂದರೆ, ನನ್ನ ಪರಿಚಿತ ವೈದ್ಯನೊಬ್ಬನು ನೂರಾರು ರೂಪಾಯಿಗಳನ್ನು ಸುರಿದು ಒಂದು ಶಸ್ತ್ರಯಂತ್ರಾಯುಧವನ್ನು ಕೊಂಡುಕೊಂಡ.

ಆ ಶಸ್ತ್ರಯಂತ್ರಾಯುಧ ದೇವತೆಯು ಇವನ ಹೊಸಲನ್ನು ಸೋಮವಾರ ದಾಟಿದಳು. ಆ ದಿನವೇ, ಸಾಯಂಕಾಲದ ಹೊತ್ತಿಗೆ, ಆ ದೇವತೆಗೆ ಒಂದು ಆಹುತಿ ಕೊಟ್ಟನು. ಅಂದರೆ ನರ ಯಜ್ಞ ಮಾಡಿದನೆಂದಲ್ಲ, ಯಂತ್ರಚಿಕಿತ್ಸೆ ಮಾಡಿದ. ದಿನಾಗಲೂ ಚಿಕಿತ್ಸೆಗೆ ಯಾರುಸಿಗುತ್ತಾರೆ? ವಾರ ಮಾಡಿಕೊಟ್ಟ ಆ ಆಯುಧ ದೇವತೆಗೆ. ಪ್ರತಿ ಸೋಮವಾರವೂ ನಿನಗೆ ಆಹುತಿ ಕೊಡುತ್ತೇನೆ ಎಂದು. ಸರಿ ಭಾನುವಾರ ನೆಗಡಿ ಎಂದು ಹೋದರೆ, ಸೋಮವಾರ ಅವರನ್ನೇ ಆಯುಧಕ್ಕೆ ಆಹುತಿ ಕೊಡಲು ಸಿದ್ಧನಾಗುತ್ತಿದ್ದ. ಹೊಟ್ಟೆ ನೋವು ಎಂದರೆ ಅವರನ್ನೂ ಹವಣಿಸುತ್ತಿದ್ದ. ಹೀಗೆ ವಾರ ಮಾಡಿಕೊಟ್ಟಿದ್ದ ದೇವತೆಗೆ.

ನನಗೆ ಹೇಗೆ ತಿಳಿಯಿತು ಗೊತ್ತೇ? ನನಗೆ ಕಾಲುನೋವು ಬಂತು, ಮಂಗಳವಾರ ವೈದ್ಯನಲ್ಲಿಗೆ ಹೋದೆ. 'ಸ್ವಲ್ಪ ಕರ್ಪೂರದ ಎಣ್ಣೆ ತಿಕ್ಕಿಬಿಟ್ಟು, ಬಿಸಿನೀರು ಶಾಖ ಕೊಡಿ' ಎಂದು ಹೇಳಿದ ವೈದ್ಯ. ಸರಿ ಹಾಗೆಯೇ ಮಾಡಿದೆ ಮೂರು ದಿನ. ಪರಿಣಾಮ ಕೈಯೆಲ್ಲಾ ಕರ್ಪೂರದ ವಾಸನೆ. ಕೈ ವಸ್ತ್ರ, ಪಂಚೆ ತುದಿಯೆಲ್ಲಾ ಕರ್ಪೂರದ ವಾಸನೆ. ಕರ್ಪೂರದ....ರಾಯ ಎಂದು ಅಡ್ಡ ಹೆಸರು ಬರುವಂತಾಗಿತ್ತು. ಸರಿ. ಶನಿವಾರ ತಿರುಗಿ ವೈದ್ಯನ ಹತ್ತಿರ ಹೋದೆ. ಬಿಡುವಾಗಿಯೇ ಇದ್ದ. 'ಏನು ವೈದ್ಯರೆ ಇವತ್ತು ಕೆಲಸ ಕಡಿಮೆ. ವಿರಾಮ' ಅಂದೆ. 'ಹೌದ್ರೀ ಸಾಯಂಕಾಲದಿಂದ ಕಾದಿದ್ದೇನೆ ಯಾರೂ ಬರಲೇ ಇಲ್ಲ. ಈ ಊರು ಹಾಳಾಗಿಹೋಯ್ತು, ಎಲ್ಲರೂ ಹೊಟ್ಟೆಪಾಡಿಗೆ ಕಷ್ಟಪಡುವಂತಾಯಿತು. ಅಕ್ಕಿ ಬೇಳೆಗೆ ಹೋರಾಡುವಂತಾಯಿತು. ಯಾರಿಗೂ ಕಾಯಿಲೆ ಬೀಳುವುದಕ್ಕೇ ಬಿಡುವಿಲ್ಲ. ಇನ್ನು ಏನಾದರೂ ದೇವರು ಕಣ್ಣು ಬಿಟ್ಟು ನೋಡುತ್ತಾನೇನೋ ನೋಡಬೇಕು' ಎಂದು ಸಾಂಗವಾಗಿ ಅವನ ಗೋಳು ಹೇಳಿಕೊಂಡ. ನಂತರ ಮೆಲ್ಲಗೆ ನಾನೇಕೆ ಬಂದಿದ್ದು ಎಂದು ವಿಚಾರಿಸಿದ ನನ್ನ ವೇದನೆ, ಅವನ ಬಳಿಗೆ ನಾನು ಮೊದಲು ಹೋಗಿದ್ದುದು ಎಲ್ಲವನ್ನೂ ಸಂಪೂರ್ಣವಾಗಿ ಮರೆತಿದ್ದನೆಂಬುದು ಆಗ ನನಗೆ ಗೊತ್ತಾಯಿತು. ಇರಲಿ ಎಂದುಕೊಂಡು ಮರಳಿ ಎಲ್ಲವನ್ನೂ ಹೇಳಿದೆ, ಹೇಗೆ ಜಪಾ

ನರ ಮಾತನಾಡುತ್ತಾ ಬಾಳೆ ಸಿಪ್ಪೆಯ ಮೇಲೆ ಕಾಲಿಟ್ಟೆ. ಸಿಪ್ಪೆ ಮುಂದಕ್ಕೆ ಹೋಗಿ ಕಾಲು ಹಿಂದಕ್ಕೆ ಝಾಡಿಸಿದ್ದು. ನೆಲ ಹೇಗೆ ಎಲ್ಲಿ ಗುಣಿ ಬಿದ್ದದ್ದು. ಏಳುವ ಹೊತ್ತಿಗೆ ಕಾಲು ಒಂದು ಭಾಗವಲ್ಲಿ ಆನೆಯ ಕಾಲಿನಂತೆ ಮನಸ್ಸಿಗೆ ತೋಚಿದ್ದು, ಎರಡು ಗಂಟೆಗಳಾದಮೇಲೆ ಆನೆಯ ಕಾಲಿನಂತೆಯೇ ಕಣ್ಣಿಗೆ ಕಂಡಿದ್ದು, ಎಲ್ಲವನ್ನೂ ಪುವರ ಹೇಳುವಂತೆ ಹೇಳಿದೆ. ಸಾವಧಾನವಾಗಿ ಆತನೂ ಕೇಳಿದ. ನಂತರ ಹೇಳಿದ 'ಅಯ್ಯೊ ಇದಕ್ಕೇನಯ್ಯಾ, ನಾನು ಹೊಸ ಯಂತ್ರ ಒಂದು ತರಿಸಿದ್ದೇನೆ ಜರ್ಮನಿಯಿಂದ, ಅರ್ಧ ಗಂಟೆ ಕಾಲ ಅದರಲ್ಲಿ ಚಿಕಿತ್ಸೆ ಮಾಡಿದರೆ ಕುಣಿಯಬಹುದು. ನೀನು ಸೋಮವಾರ ಬೆಳಿಗ್ಗೆ ಎಂಟು ಗಂಟೆಗೆ ಬಂದುಬಿಡು' ಎಂದು ಹೇಳಿದ. ಸರಿ. ಸೋಮವಾರ ನಾನು ಆಹುತಿ. ಮಂಗಳವಾರ ನೋವೇನೋ ಕಡಿಮೆ. ಆದರೂ ಇನ್ನೊಂದಾವರ್ತಿ ಇದೇ ಚಿಕಿತ್ಸೆ ನಡೆದರೆ ಇನ್ನೂ ಚೆನ್ನು ಎಂದು ಹೋದೆ 'ಬೇಡವಯ್ಯಾ ಬೇಡ' ಎಂದ. 'ಅಧಿಕಸ್ಯ ಅಧಿಕಂ ಫಲಂ' ಎಂದು ನಾನು ಹೇಳಿದೆ. "ಉಷ್ಣಂ ಉಷ್ಣೇಣ ಶೀತಳಂ" ಎಂದು ಮಾರುತ್ತರ ಕೊಟ್ಟ. ಅಂತೂ ಏನೂ ಇಲ್ಲದೆ ಹಿಂತಿರುಗಿದೆ. ಸ್ವಲ್ಪ ನೋವು ಉಳಿದೇ ಇತ್ತು. ಮುಂದಿನ ಭಾನುವಾರ ಬೆಳಿಗ್ಗೆ ತಿರುಗಿ ಅವನ ಬಳಿಗೆ ಹೋದೆ. ಏನೋ ಪರೀಕ್ಷಿಸುವನಂತೆ ಕಾಲನ್ನೆಲ್ಲಾ ಮುಟ್ಟಿ ನೋಯಿಸಿದ. ನಾಳೆ ಬೆಳಿಗ್ಗೆ ಬನ್ನಿ ಜರ್ಮನಿ ಯಂತ್ರ ಚಿಕಿತ್ಸೆ ಮಾಡುತ್ತೇನೆ ಎಂದ. ಈ ವೇಳೆಗೆ ಈ ಸೋಮವಾರದ ಯಂತ್ರಾಹುತಿ ನನಗೆ ಮನದಟ್ಟಿತ್ತು. 'ಯಾಕ್ರೀ ಸೋಮವಾರ, ಇವತ್ತೇ ಯಾಕೆ ಮಾಡಬಾರದು ಸೋಮವಾರವೇ ನೀವು ಆ ಯಂತ್ರಕ್ಕೆ ಆಹುತಿ ಕೊಡಬೇಕೊ. ಇಲ್ಲದಿದ್ದರೆ ಯಂತ್ರ ನಿಮ್ಮೇಲೆಯೇ ಬೀಳುತ್ತೋ?' ಎಂದೆ.

ವೈದ್ಯ ಗಾಬರಿಯಾದ. ಅವನ ಗುಟ್ಟು ನನಗೆ ತಿಳಿದುಹೋಯಿತೆಂದು ಹೆದರಿರಬೇಕು. ಯಾರಿಗಾದರೂ ಹೇಳಿಬಿಟ್ಟರೆ ಇವನ ಬಾಯಿಗೆ ಮಣ್ಣು ಬೀಳುತ್ತದೆಯೋ ಎಂಬ ಭೀತಿ ಬಂದಿರಬೇಕು.

'ಆದರೆ ಹಾಗೆಲ್ಲ ಹೇಳಬೇಡಯ್ಯಾ ಅದು ದೇವತಾ ಯಂತ್ರ. ಅವಮಾನದ ಮಾತಾಡಿದರೆ ತಲೆ ತೆಗೆದುಬಿಡುತ್ತೆ ಎಂದು ಹೇಳಿದ. ಅಲ್ಲದೆ ಭಾನುವಾರ ವಿದ್ಯುಚ್ಛಕ್ತಿ ಇಲ್ಲ ಹಾಗಾಗಿ ನಿಮಗೆ ಯಂತ್ರಚಿಕಿತ್ಸೆ ಸಾಧ್ಯವಿಲ್ಲ ಎಂದೂ ಹೇಳಿದ.

ಕಡೆಗೆ ನೋಡಿ. ಭಾನುವಾರ ಸಾಯಂಕಾಲ ಯಾವುದೋ ಪ್ಲೇಗು ರೋಗಿ ನೋಡಲು ಹೋಗಿದ್ದನಂತೆ. ಸೋಮವಾರ ಜ್ವರ ಬಂದಂತಾಗಿ ಮಲಗಿದನಂತೆ. ಯಂತ್ರಾಹುತಿ ಕೊಡಲಾಗಲಿಲ್ಲವಂತೆ. ಬುಧವಾರ ಹರಹರಾ ಎಂದೇಬಿಟ್ಟ.

ಇಂತಹ ಯಂತ್ರ ಮನೆಯಲ್ಲಿರಬಾರದು ಎಂದು ಮನೆಯವರು ಊರಾಚೆ ಇದ್ದ ದವಾಖಾನೆಗೆ ಸಾಗಿಸಿಬಿಟ್ಟರು.



# ಕಾಪಿ ಹೊಡೆಯುವುದು ಹೇಗೆ?

ಪರೀಕ್ಷೆಗಳಿಗೆ ಕುಳಿತು ಪ್ರಶ್ನೆಗಳಿಗೆ ಉತ್ತರ ಬರೆದು ತನ್ಮೂಲಕ ಜನ್ಮ ಸಾರ್ಥಕ ಮಾಡಿಕೊಳ್ಳಬೇಕಾಗಿ ಬಂದಿರುವ ಈ ಇಪ್ಪತ್ತನೆಯ ಶತಮಾನದಲ್ಲಿ ಪರೀಕ್ಷಾ ಜಯ ಲಾಭ ವಿಧಾನವನ್ನು ಪ್ರತಿಯೊಬ್ಬರೂ ಕಲಿತಿರಬೇಕಾದ್ದು ಅತ್ಯವಶ್ಯಕ. ಪರೀಕ್ಷೆಯಲ್ಲಿ ಜಯ ಎಂಬುದು ಅದೃಷ್ಟ; ಅಥವಾ ದೃಷ್ಟ. "ಅದೃಷ್ಟ" ಎಂದರೆ, ಪರೀಕ್ಷೆಗಾಗಿ ಉತ್ತರ ಬರೆಯುವಾಗ ತಮ್ಮ ಎಡಬಲಗಳಲ್ಲೇ ಅಥವಾ ಮುಂದುಗಡೆಯೋ ಕುಳಿತು ಬರೆಯುವ ವಿದ್ಯಾರ್ಥಿಯ ಹಾಳೆಗಳು ಕಣ್ಣಿಗೆ ಬೀಳದಿರುವುದು. ಹೀಗೆ ಅವು ಕಾಣಿಸದೆ ಇರುವುದರಿಂದ ಪ್ರತಿಯೊಂದು ಪ್ರಶ್ನೆಯನ್ನೂ ಒಬ್ಬನೇ ಅಸಹಾಯನಾಗಿ ಬಿಡಿಸಬೇಕಾಗಿ ಬರುತ್ತದೆ. ಇದರಿಂದ ಅನೇಕ ವೇಳೆ ಸೋಲು ಸಂಭವಿಸಿದರೂ ಸಂಭವಿಸಬಹುದು. "ದೃಷ್ಟ" ಅಂದರೆ, ಅಂತಹ ಹಾಳೆಗಳು ಚೆನ್ನಾಗಿ ಕಾಣಿಸುವ ಸನ್ನಿವೇಶ, ಎಂದರ್ಥ. ವಿಜ್ಞಾನದ ಪ್ರಭಾವದಿಂದ ದೇಶದೇಶಗಳೇ ಉರುಳುತ್ತಿರುವ ಈ ಕಾಲದಲ್ಲಿ ಅದೃಷ್ಟವನ್ನು ದೃಷ್ಟವನ್ನಾಗಿ ಮಾಡಲು ಸಾಧ್ಯ ಎಂಬ ಭರವಸೆಯನ್ನು ನಮ್ಮ ಸಂಸ್ಥಾನದ ತರುಣರಿಗೆ ನೀಡುವುದೇ ಈ ಲೇಖನದ ಉದ್ದೇಶ. ಅಭ್ಯಾಸದಿಂದಲೂ ಬುದ್ಧಿಪೂರ್ವಕವಾದ ಸಂಶೋಧನೆಯಿಂದಲೂ ನೆರವೇರಿಸಲು ಅಸಾಧ್ಯವಾದದ್ದು ಯಾವುದು? ಯಾವುದೂ ಇಲ್ಲ. ''ದಡ್ಡರ ನಿಘಂಟುವಿನಲ್ಲಿ ಮಾತ್ರ ಅಸಾಧ್ಯವೆಂಬ ಪದ ಸಿಗುತ್ತದೆ" ಎಂದು ನೆಪೋಲಿಯನ್ ಹೇಳಿಲ್ಲವೇ, ಹೆಲೆನಾದ್ವೀಪದ ಕಾರಾಗೃಹದಿಂದ?

ಇರಲಿ! ಈಗ ಅದೃಷ್ಟವನ್ನು ದೃಷ್ಟವಾಗಿಸುವ "ಕಾಪೀ ಸೂತ್ರ"ಗಳಲ್ಲಿ ಒಂದೆರಡನ್ನು ಉಲ್ಲೇಖಿಸೋಣ. ಉಲ್ಲೇಖಿಸುವ ಮೊದಲು ಕಾಪಿ ಮಾಡುವುದು ಅಧರ್ಮವೆಂದು ವಾದಿಸುವ ಮಂದಮತಿಗಳಿಗೆ ಎರಡು ಮಾತು ಹೇಳಬೇಕಾಗುತ್ತದೆ. ಶ್ರಮಜೀವಿಗಳ ಶ್ರಮವನ್ನು ಕಡಿಮೆ ಮಾಡಿ ಅವರಿಗೆ ಆದಷ್ಟು ಆಹ್ಲಾದವನ್ನುಂಟುಮಾಡುವುದೇ ನಾಗರಿಕ ಸರ್ಕಾರಗಳ ನೀತಿಯಾಗಿರುವಾಗ, ವಿದ್ಯಾರ್ಥಿಗಳಂತಹ ಶ್ರಮಜೀವಿಗಳು ಕಾಪೀ ತಂತ್ರದಿಂದ ತಮ್ಮ ಶ್ರಮವನ್ನಿಳಿಸಿಕೊಂಡರೆ ವಿದ್ಯಾಗುರುಗಳು ಅವರ ಮೇಲೆ ಕೋಪ ಕಾರುವುದು ಸಮಂಜಸವಾಗಿಲ್ಲ. ಅಲ್ಲದೆ, ಒಬ್ಬನ ಓದಿನಿಂದ ಸುತ್ತಮುತ್ತಲಿನ ನಾಲ್ಕು ಜನಕ್ಕೆ ಉಪಕಾರವಾಗುವುದಾದರೆ ಅಂತಹ ಸಂದರ್ಭವನ್ನು ಸದುಪಯೋಗಪಡಿಸಿಕೊಂಡು ಹಾಳೆಗಳನ್ನು ಹರಡಿಡಬೇಕಾದ್ದು ಸೇವಾತತ್ಪರನಾದ ವಿದ್ಯಾರ್ಥಿಯ ಪ್ರಥಮ ಕರ್ತವ್ಯ! ದೊಡ್ಡವರಲ್ಲಿ ಕಂಡುಬರುವ ಅಸಹಕಾರ, ದ್ವೇಷ, ಅಸೂಯೆ,.....ಸ್ವಾರ್ಥ ಬುದ್ಧಿ ಇವೆಲ್ಲವೂ ವಿದ್ಯಾರ್ಥಿ ದೆಸೆಯಲ್ಲಿ ಶಾಲಾ ಕಾಲೇಜುಗಳಲ್ಲಿ ಬಿತ್ತಿ ಬೆಳೆಸಿದ ದುರ್ಭಾವನೆಗಳು! ನಾನು ಬೇರೆ, ಅವನು ಬೇರೆ; ನಾನು ಬರೆದದ್ದನ್ನು ಅವನಿಗೆ ತೋರಿಸಿದರೆ ಅವನೂ ನನ್ನಂತೆಯೇ ನಂಬರ್ ತೆಗೆದಾನು ಎಂಬ ಸಂಕುಚಿತ ಬುದ್ಧಿಯನ್ನು ನಾಶಮಾಡಿ ಮಾನವನನ್ನು ದಾನವತ್ವದಿಂದ ಮೇಲೆತ್ತಬೇಕಾದದ್ದೇ ವಿದ್ಯಾಭ್ಯಾಸ ಕ್ರಮದ ಸದುದ್ದೇಶ. ನೆರೆಯವನನ್ನು ನಿನ್ನಂತೆಯೇ ಕಾಣು, ನಿನಗೆ ಇತರರು ಏನು ಮಾಡಬೇಕೆಂದು ನೀನು ಬಯಸುವೆಯೋ ಹಾಗೆಯೇ ಇತರರಿಗೆ ನೀನೂ

ಮಾಡು—ಮುಂತಾದ ಮೂಲವಾಕ್ಯಗಳನ್ನು ಮೂಲೆಗೊತ್ತುವುದು ನ್ಯಾಯವೇ? ಕಲಿತ ವಿದ್ಯೆಯನ್ನು ಸ್ವಾರ್ಥಕ್ಕಾಗಿ ಕೂಡಿಟ್ಟು ಬಚ್ಚಿಟ್ಟು ಕೃಪಣನಂತೆ ಕತ್ತಲಲ್ಲಿ ಕೂಡುವವನನ್ನ ನಮ್ಮ ಮಹರ್ಷಿಗಳು ಬಾಯಿಗೆ ಬರಬಾರದ ಹಾಗೆ ಬೈದಿಲ್ಲವೆ? ಪರೀಕ್ಷಾ ಮಂದಿರಗಳಲ್ಲಿ ಆಸನ ವಿತರಣೆಯನ್ನೂ ಮೇಲ್ವಿಚಾರಣಾ ವ್ಯವಸ್ಥೆಯನ್ನೂ ಕಠಿನತರವಾಗಿ ಕೈಗೂಡಿಸಿ, ಬೇಲಿಯೆದ್ದು ಹೊಲ ಮೇದಂತೆ, ಉಪಾಧ್ಯಾಯರೇ ಬಾಲಕರ ಪರಸ್ಪರ ಸಹಾಯಕ್ಕೆ ಅಡ್ಡ ಬಂದರೆ, ಇದನ್ನು ಕಣ್ಣಾರ ಕಂಡು ಪ್ರಜಾಪ್ರತಿನಿಧಿಗಳು ಸುಮ್ಮನಿರಬಹುದೋ? ''ಮೂಕಂ ಕರೋತಿ ವಾಚಾಲಂ" ಎಂಬ ವಾಕ್ಯ ಎಲ್ಲಿ ಹೋಯಿತು? ಜ್ಞಾನವನ್ನು ಹಲವಾರು ಕಡೆಗಳಿಂದ ತಂದು ತುಂಬಿಕೊಳ್ಳಿರಿ—ಎಂದು ವೇದಿಕೆಗಳ ಮೇಲೆ ನಿಂತು ಉಪದೇಶಿಸುವ ಆಚಾರ್ಯರು ಪಕ್ಕದಲ್ಲಿ ಕುಳಿತ ವಿದ್ಯಾರ್ಥಿಯಿಂದ ಜ್ಞಾನದ ಒಂದು ಸಣ್ಣ ಚೂರನ್ನೂ ಸಹ ಸಂಪಾದಿಸಲು ಅಡ್ಡಿಯಾಗಿ ಬಿಟ್ಟ ಕಣ್ಣು ಬಿಟ್ಟಹಾಗೆ ಎದುರುಗಡೆ ನಿಂತಿರಬಹುದೆ? ನ್ಯಾಯವೆ? ಧರ್ಮವೆ? "ಹೃದಯದ ಕಿಟಿಕೆಗಳನ್ನೆಲ್ಲ ತೆರೆಯಿರಿ! ಕಣ್ಣಿನ ಪೊರೆಯನ್ನು ತೆಗೆಯಿರಿ" ಎಂದು ಕೂಗುವ ಮಾತಿನ ಮಲ್ಲರು ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳಿಗೆ, ಶಕಟಾಶ್ವಗಳಂತೆ ಬ್ಲಿಂಕರು ಪಡಿಸಬಹುದೋ?

ಆದರೆ, ಹಿರಿಯರ ಬುದ್ಧಿ ನೆಟ್ಟಗಾಗುವತನಕ ವಿದ್ಯಾರ್ಥಿಗಳು ಕೈಕಟ್ಟಿಕೊಂಡು ಕುಳಿತರೆ, ವಿದ್ಯಾರ್ಥಿಗಳೂ ಕೂಡ ಹಿರಿಯರಾಗಿಬಿಡುತ್ತಾರೆ. ಆದ್ದರಿಂದ, ಕೆಳಗೆ ಕೊಟ್ಟಿರುವ ಹಲವು ಅಭ್ಯಾಸಗಳನ್ನು ಈಗಿನಿಂದಲೇ ದಿನವೊಂದಕ್ಕೆ ಅರ್ಧಗಂಟೆಯಂತೆ ಅವಿಚ್ಛಿನ್ನವಾಗಿ ಮಾಡಿದರೆ, ಅದೃಷ್ಟವನ್ನು ದೃಷ್ಟವಾಗಿ ಮಾಡಿಸಿಕೊಂಡು ಸುಲಭದಲ್ಲೇ ಪಾಸಾಗಬಹುದು.

೧. ಬೆಂಚಿನ ಹಿಂದಿನ ಅಂಚಿಗೆ ಸರಿಯಾಗಿ ಮುಂಡಿಗಳೆರಡನ್ನೂ ತಂದು, ಹಾಗೆಯೇ ಭದ್ರವಾಗಿ ಕುಳಿತು, ಸೊಂಟದ ಮೇಲು ಭಾಗದ ಮೈಯನ್ನು ಆದಷ್ಟು ಹಿಂದಕ್ಕೆ ಬಾಗಿಸಿ ಎಡಪಾರ್ಶ್ವವಾಗಿ ತಿರುಗಿ ಆಕಳಿಸುವುದು. ಆಕಳಿಸುವಾಗ ಕಣ್ಣುಗಳೆರಡನ್ನೂ. ಮುಖ್ಯವಾಗಿ ಎಡಗಣ್ಣನ್ನು ಆದಷ್ಟು ಎಡಗಡೆಗೆ ಮುಂದುವರಿಸಿ ಉರುಳಿಸುವುದು. [ಇದನ್ನು ದಿನವೂ ಹತ್ತು ಸಲ ಅಭ್ಯಾಸ ಮಾಡಿ]

೨. ಹಾಗೆಯೇ ಕುಳಿತು, ಬಲಪಾರ್ಶ್ವವಾಗಿ ತಿರುಗಿ ಆಕಳಿಸುವುದು. ಆಕಳಿಸುವಾಗ ಕಣ್ಣುಗಳೆರಡನ್ನೂ, ಮುಖ್ಯವಾಗಿ ಬಲಗಣ್ಣನ್ನು ಆದಷ್ಟು ಬಲಗಡೆಗೆ ಮುಂದುವರಿಸಿ ಉರುಳಿಸುವುದು [ಇದನ್ನೂ ಹತ್ತು ಸಲ ಅಭ್ಯಾಸ ಮಾಡಿ]

೩. ಅದೇ ಬೆಂಚಿನ ಮುಂದಿನ ಅಂಚಿನಲ್ಲೇ ಆದಷ್ಟು ಮುಂದಾಗಿ ಕುಳಿತು ಒಂದವಾರು ದೂರಕ್ಕೆ ಸರಿಯಾಗಿ ಬೀಳುವಂತೆ ಬಲಭಾಗಕ್ಕೆ ಪೆನ್ಸಿಲನ್ನೆಸೆದು ಬಲಕ್ಕೆ ಬಾಗಬೇಕು. ಬಾಗುವಾಗ ಅರ್ಧಚಕ್ರಾಕಾರವಾಗಿ ಬಾಗಬೇಕು. ಕತ್ತನ್ನು ಆದಷ್ಟುಬಲಕ್ಕೆ ನೀಡಿ ಕಣ್ಣುಗಳೆರಡನ್ನೂ ಆದಷ್ಟುಮುಂದುವರಿಸಿ ಉರುಳಿಸಬೇಕು. [ಈ ಅಭ್ಯಾಸ ಕೊಂಚ ಕಷ್ಟವಾದ್ದರಿಂದ ಮೊದಲನೆಯ ವಾರ ಎಂಟು ಸಲವೂ ಹೀಗೆ ಕ್ರಮವಾಗಿ ನೀವೂ ಎರಡ

ನೆಯವಾರ ಎಂಟು ಸಲವೂ ಹೀಗೆ ಕ್ರಮವಾಗಿ ಹೆಚ್ಚಿಸಿಕೊಂಡು ಮಾರ್ಚಿ ತಿಂಗಳೊಳಗೆ ಮೂವತ್ತು ಸಲ ಮಾಡುವಷ್ಟು ಚೈತನ್ಯ ಪಡೆದರೆ ಸಾಕು.]

೪. ಹಾಗೆಯೇ, ಎಡಕ್ಕೆ ಬಾಗಬೇಕು. ಕತ್ತನ್ನು ಆದಷ್ಟು ಎಡಕ್ಕೆ ನೀಡಿ ಕಣ್ಣುಗಳನ್ನು ಮುಂದುವರಿಸಿ ಉರುಳಿಸಬೇಕು. [ಇದನ್ನೂ ಮೊದಲನೆಯ ವಾರ ನಾಲ್ಕು ಸಾರಿಗಿಂತ ಮಾಡಕೂಡದು. ಆರಂಭ ಶೂರತ್ವದಿಂದ ಅಭ್ಯಾಸ ಮಾಡಿದರೆ, ಕಣ್ಣುಗಳೆರಡೂ ಬಿದ್ದುಹೋಗುವ ಸಂಭವವುಂಟು!]

೫. ಮುಂದುಗಡೆ ಒಂದು ಬೆಂಚನ್ನು ಹಾಕಿ ಅದರ ಕೆಳಗೆ ಪೆನ್ಸಿಲನ್ನು ಎಸೆದು ಬಾಗಿಎತ್ತುವಾಗ "ಗಂಟೆ ಎಷ್ಟು?" ಎಂದು ಇತರರಿಗೆ ಕೇಳಿಸುವ ಹಾಗೆ "ಬ್ಯಾಟಲ್ ಅಫ್ ಪ್ಲಾಸಿ" ಅಂತ ಉಚ್ಚಾರ ಮಾಡಿ. ಈ ಅಭ್ಯಾಸದಲ್ಲಿ ಚನ್ನಾಗಿ ತರ್ಬೇತಾದರೆ, ಬಹು ಸುಲಭದಲ್ಲೇ ನಾವು ನಮ್ಮ ಸ್ನೇಹಿತರಿಂದ ಪರೀಕ್ಷಾ ಮಂದಿರದಲ್ಲೇ, ಪ್ಲಾಸಿ ಕದನದ ತಾರೀಖನ್ನು ತೆಗೆದುಕೊಳ್ಳಬಹುದು.

೬. ಹಾಗೆಯೇ, "ಏನು ಶಿಖೆ!" ಎಂದು ಕೇಳಿಸುವ ಹಾಗೆ" "ಐಲು ದೊರೆಯ ಐಲು ತನಕ್ಕೆ ಐದು ಉದಾಹರಣೆಗಳು'' ಎಂದು ಉಚ್ಚರಿಸಲು ಕಲಿಯಿರಿ. "ವಾಟ್ ಇಸ್ ದಿ ಟೈಂ?" ಎಂದು ಮೇಷ್ಟರಿಗೆ ಕೇಳಿಸುವ ಹಾಗೆ ''ವಾಟ್ ಆರ್ ದಿ ಕ್ಯಾರಕ್ಟರಿಸ್ಟಿಕ್ಸ್ ಅಫ್ ದಿ ವಿಕ್ಟೋರಿಯರ್ನ್ಸ್?" ಅಂತ ಉಚ್ಚರಿಸಲು ಕಲಿತರೆ ಈ ವರ್ಷದ ಬಿ. ಎ. ಡಿಗ್ರಿ ಕರತರಲಾಮಲಕ ಹೀಗೆ ಕೇವಲ ಕೆಲವು ಅಭ್ಯಾಸಗಳನ್ನು ಶ್ರದ್ಧೆಯಿಂದ ದಿನವೂ ನಡೆಸಿ ಅವುಗಳಲ್ಲಿ ಸುಶಿಕ್ಷಿತರಾದರೆ, ನಾವು ಅತಿ ಸುಲಭದಲ್ಲೇ ಪರೀಕ್ಷೆಗಳಲ್ಲಿ ಪಾಸು ಪಡೆದು ಎಂ. ಸೀ. ಎಸ್ಸಿನಲ್ಲಿ ಸ್ಥಾನ ಗಳಿಸಿ ಅಸಿಸ್ಟೆಂಟ್ ಕಮೀಷನರುಗಳಾಗಿ ಹತ್ತಾರು ಸಾವಿರ ಜನರ ಮೇಲೆ ಕಾರ್ಯಭಾರ ಮಾಡಬಹುದು.

---

ಇನ್ನು ಮೇಲೆ ಸಂಗೀತ ಕಛೇರಿಗಳಿಗೆ ಹೋಗುಃ ಲಿಗಳನ್ನು ಬಿಡಬೇಕೆಂದು ಒತ್ತಾಯಪಡಿಸುತ್ತಾರಂತೆ.

—ಇದೇನು? ಹೀಗೆ ನಿರಸ್ತ್ರರನ್ನಾಗಿ ಮಾಡುವುದರ ಅಭಿಪ್ರಾಯವಾವರೂ ಏನು?

* * *

ಇಡೀ ಯೂರೋಪಿನಲ್ಲೆಲ್ಲಾ ಕ್ರಿಸ್‌ಮಸ್ ಹಬ್ಬವನ್ನು ಸಾಂಗವಾಗಿ ಆಚರಿಸಿದರಂತೆ—

—ಏನಾಶ್ಚರ್ಯ? ಹಾಗಾದರೂ ಟರ್ಕಿಯು ಇನ್ನೂ ಜೀವಂತವಾಗಿದೆ.

# "ಬೆಂಡಿನ ರುಮಾಲು"

ಆರೇಳು ಜನ ಮಲಯಾಳದ ವಿಚಾರ ಮಾತನಾಡುತ್ತಿದ್ದೆವು. ಅಲ್ಲಿನ ಹಾವುಗಳು, ಆಯುರ್ವೇದ, ಕಥಕಳಿ, ರಾಣಿಕೇಯ್ರು, ಮಂತ್ರಿಕರು, ಇವುಗಳೆಲ್ಲವನ್ನೂ ತರ್ಕಿಸುತ್ತಿದ್ದೆವು. ಆವೇಶಪೂರಿತ ಧ್ವನಿಯಿಂದ ಸೂರುವು ಹೇಳತೊಡಗಿದ.

'ನನ್ನ ವಿಮಾ ಸ್ನೇಹಿತ ಒಂದು ಮಲಯಾಳದ ಕತೆಯನ್ನು ಹೇಳಿದ. ವಿಚಿತ್ರವಾದ ಕಥೆ. ಮಲಯಾಳದಲ್ಲಿ ಒಬ್ಬ ದೊಡ್ಡಮನುಷ್ಯನಿದ್ದನಂತೆ. ಆತನು ಮೈಸೂರಿಗೆ ಒಮ್ಮೆ ಹೋಗಬೇಕಾಯಿತಂತೆ. ಮೈಸೂರಿಗೆ ಹೋದರೆ ಅಲ್ಲಿ ಎಲ್ಲರೂ ರುಮಾಲುಸುತ್ತಿಕೊಳ್ಳುತ್ತಾರೆಂದು ತಿಳಿದು ಆತನೂ ಒಂದು ರುಮಾಲು ಕೊಳ್ಳಬೇಕೆಂದು ನಿರ್ಧರಿಸಿದನಂತೆ. ಆತನ ಸ್ನೇಹಿತನೊಬ್ಬನು ಹೇಳಿದನಂತೆ ರುಮಾಲು ಕೊಂಡರೆ ಏನು ಪ್ರಯೋಜನ, ಅದನ್ನು ಕಟ್ಟುವುದು ಕಷ್ಟ. ಇಲ್ಲೇ ಸುತ್ತಿದ ರುಮಾಲುಗಳು ಮಾರಾಟಕ್ಕಿವೆ. ಅದನ್ನು ಕೊಂಡುಕೊಂಡರೆ ಸುಲಭವೆಂದು. ಆತನೂ ಇದನ್ನು ಒಪ್ಪಿದನಂತೆ ಟೋಪಿ ಹಾಕುವ ಹಾಗೆ ಈ ರುಮಾಲನ್ನೇ ಹಾಕಿಕೊಂಡರೆ ಕಷ್ಟವೂ ತಪ್ಪಿತು ಅಂದವೂ ಆಯಿತು ಎಂದುಕೊಂಡು ಅಂಗಡಿಗೆಹೋಗಿ ಸುತ್ತಿದ ರುಮಾಲೊಂದನ್ನು ಕೊಳ್ಳಲು ಯತ್ನಿಸಿದನಂತೆ. ಅಂಗಡಿಯವನು ಹಲವಾರನ್ನು ತೋರಿಸಿ ದಡೂತಿಯಾದ ಒಂದು ರುಮಾಲನ್ನು ಹಿಡಿದುಕೊಂಡು, ಇದನ್ನು ಕೊಂಡುಕೊಳ್ಳಿ ಬೆಂಡಿನ ಮೇಲೆ ಈ ರುಮಾಲನ್ನು ಸುತ್ತಿದೆ. ನೋಡುವುದಕ್ಕೆ ಭಾರವಾಗಿದೆ. ಧರಿಸುವುದಕ್ಕೆ ಟೋಪಿಯಂತೆ ಹಗುರವಾಗಿದೆ. ಬೆಲೆ ಹೆಚ್ಚಾದರೂ ಬಾಳಿಕೆಯೂ ಹೆಚ್ಚು ಎಂದು ಹೊಗಳಿದನಂತೆ. ರಂಗನ್ನೂ ನೋಡಿ ಮೆಚ್ಚಿದ್ದ ಆತನು ಈ ಹೊಗಳಿಕೆಗೆ ಬಾಯ್ತೆರದು, ಕೊಂಡನಂತೆ. ಮನೆಗೂ ತಂದನಂತೆ. ತನ್ನ ಕೊಠಡಿಯ ಮೇಜಿನ ಮೇಲಿಟ್ಟು ಹಜಾರದಲ್ಲಿ ಕುಳಿತು ತನ್ನ ವ್ಯಾಪಾರದ ವಿಚಾರವಾಗಿ ಹಿಗ್ಗುತ್ತಿದ್ದನಂತೆ. ಆ ವೇಳೆಗೆ ಆತನ ಸ್ನೇಹಿತನೊಬ್ಬನು ಬಂದನಂತೆ. ಅವನಿಗೂ ಈ ವ್ಯಾಪಾರದ ವಿಚಾರ ಹೇಳಿದನಂತೆ. ರುಮಾಲನ್ನು ತಂದು ತೋರಿಸುತ್ತೇನೆ ಎಂದು ಕೊಠಡಿಗೆ ಹೋದರೆ, ಮೇಜಿನ ಮೇಲಿದ್ದ ರುಮಾಲು ಕೆಳಗೆ ಬಿದ್ದಿತಂತೆ. ಮೇಲಿದ್ದ ರುಮಾಲು ಕೆಳಗೆ ಹೇಗೆ ಬಿತ್ತು ಎಂದು ಯೋಚಿಸುತ್ತ ಅದನ್ನು ತಂದು ಸ್ನೇಹಿತನಿಗೆ ತೋರಿಸಿದನಂತೆ. ಸ್ನೇಹಿತನು ನೋಡಿ ಬಲು ಚೆನ್ನಾಗಿದೆ ಎಂದು ಹೇಳಿ ಪಕ್ಕದಲ್ಲಿದ್ದ ಬೆಂಚಿನ ಮೇಲಿಟ್ಟನಂತೆ. ಹಾಗೆಯೇ ಮಾತನಾಡುತ್ತಿದ್ದಾಗ ರುಮಾಲು ಬೆಂಚಿನಿಂದ ಕೆಳಕ್ಕೆ ಇಳಿದು ಬಿತ್ತಂತೆ. ಅಲ್ಲಿಯೂ ಮೆಲ್ಲ ಮೆಲ್ಲಗೆ ಓಡಾಡಲಾರಂಭಿಸಿತಂತೆ. ಇಬ್ಬರೂ ಅವಾಕ್ಕಾದರಂತೆ. ಒಂದೇ ಯೋಚನೆ ಇಬ್ಬರಿಗೂ, ರುಮಾಲನ್ನು ಅಂಗಡಿಗೆ ವಾಪಸ್ಸು ಕೊಟ್ಟು ಈ ರುಮಾಲು ದೆವ್ವಗ್ರಸ್ಥವೆಂದು ಹೇಳುವುದು. ಸರಿ, ರುಮಾಲನ್ನು ಹೆದರಿ ಹೆದರಿ ಬುಟ್ಟಿಯಲ್ಲಿಟ್ಟುಕೊಂಡು ಅಂಗಡಿಗೆ ಹೊರಟರಂತೆ. ಅಲ್ಲಿ ಅಂಗಡಿಯ ಮಾಲೀಕರನ್ನು ಕರೆದು ಮನೆಯಲ್ಲಿ ನಡೆದದ್ದನ್ನೆಲ್ಲಾ ಹೇಳಿದರಂತೆ. ಆತನಿಗೆ ರುಮಾಲನ್ನು ವಾಪಸು ಕೊಟ್ಟರಂತೆ.

ಅಂಗಡಿಯವನು ಕಿರುನಗುತ್ತಾ ಏನು ಊಟ ಮಾಡಿದ್ದೀರಿ, ನೀರು ಏನಾದರೂ ಸೇವೆ ಮಾಡಿದ್ದಿರಾ, ಪಿತ್ತ ಶರೀರದವರಿಗೆ

ಕೆಲವು ವೇಳೆ ಹೀಗೆ ಭ್ರಮೆಯಾಗುವುದುಂಟು. ನಿಮಗೂ ಹಾಗಾಗಿರಬಹುದು. ರುಮಾಲು ಕೆಳಗಿಳಿದು ಬೀಳಬಹುದಂದರೇನು ತಾರಾಡುವುದೆಂದರೇನು, ಇವೆಲ್ಲಾ ಸೋಜಿಗದ ಮಾತಲ್ಲವೇ ಎಂದು ಹೇಳಿದನಂತೆ. ಹಾಗೆಯೇ ರುಮಾಲನ್ನು ಕೈಲಿ ಹಿಡಿದಿದ್ದವನು ಪಕ್ಕದಲ್ಲಿದ್ದ ಮೇಜಿನ ಮೇಲೆ ಇಟ್ಟನಂತೆ.

'ಪಿತ್ತವೂ ಇಲ್ಲ ಗಿತ್ತವೂ ಇಲ್ಲ. ಕಣ್ಣಾರೆ ನೋಡಿದೆವಯ್ಯಾ ನಾವು. ಮೇಲಿದ್ದ ರುಮಾಲು ಕೆಳಕ್ಕೆ ಬಿತ್ತು' ಎಂದು ಇವರಿಬ್ಬರೂ ಒತ್ತಿ ಒತ್ತಿ ಹೇಳಲಾರಂಭಿಸಿದರಂತೆ.

'ಸಂಶಯ ದೃಷ್ಟಿಯಿಂದ ಇವರನ್ನೇ ನೋಡುತ್ತಿದ್ದ ಅಂಗಡಿಯವನು ಹಾಗಾದರೆ 'ಈಗೇಕೆ ರುಮಾಲು ಬೀಳಬಾರದು' ಎಂದು ಪ್ರಶ್ನಿಸಿದನಂತೆ.

ಅವನಿಗೆ ಉತ್ತರ ಕೊಡಲೋ ಎಂಬಂತೆ ರುಮಾಲು ಮೇಜಿನಿಂದ ಕೆಳಕ್ಕೆ ತಕ್ಷಣ ಬಿತ್ತಂತೆ. ಅಂಗಡಿಯವನು ಗಾಬರಿಯಾದನಂತೆ. ಅಂಗಡಿಯಲ್ಲಿದ್ದ ನೌಕರರನ್ನೆಲ್ಲಾ ಕರೆದನಂತೆ. ಈ ರುಮಾಲಿನ ವಿಚಾರ ಹೇಳಿದನಂತೆ. ಇದೇ ದೆವ್ವನುಗ್ರಸ್ತ ರುಮಾಲು. ಇಂತಹುದನ್ನು ನೀವು ಯಾರಾದರೂ ನೋಡಿದ್ದಿರಾ. ಕಾರಣ ಬಲ್ಲಿರಾ ಎಂದು ಕೇಳಿದನಂತೆ. "ಬೆಂಡು ಬಂದ ಕೊಳದಲ್ಲಿ ಬ್ರಾಹ್ಮಣನು ಯಾರಾದರೂ ಸತ್ತಿದ್ದರೆ ಹೀಗಾಗುವುದುಂಟು, ಆ ಬೆಂಡಿನಿಂದಲೇ ಈ ರುಮಾಲು ತಯಾರಾಗಿದ್ದರೆ ಇದು ನಿಶ್ಚಯ" ಎಂದು ನೌಕರನೊಬ್ಬನು ಹೇಳಿದನಂತೆ. ಹಾಗಾಗಿದೆ ಎಂದು ಕಂಡುಹಿಡಿಯುವುದುಹೇಗೆ ಎಂದು ಮಾಲೀಕನು ಕೇಳಿದನಂತೆ,

"ಅದೇನು ಸುಲಭ. ಆ ಬೆಂಡಿನ ಮೇಲೆ ಜನಿವಾರದ ಗುರ್ತು ಇರುತ್ತದೆ. ಪಟ್ಟಿ ಎಳೆದ ಹಾಗೆ ಮೂರು ಪಂಜ್ತಿ ಇರುತ್ತದೆ ಎಂದು ನೌಕರನು ಉತ್ತರ ಹೇಳಿದನಂತೆ.

ಕೂಡಲೇ ಮಾಲೀಕನು ಕತ್ತರಿ ಚಾಕುವಿಗೆ ಹೇಳಿ ಕಳುಹಿಸಿದನಂತೆ. ಬಂದ ಕೂಡಲೆ ರುಮಾಲನ್ನು ಹರಿದನಂತೆ. ಬೆಂಡು ಕಿತ್ತಾಗ ಸಂದಿಯಿಂದ ಒಂದು ಜೀವಂತ ಹಾವು ಹೊರಕ್ಕೆ ಬಂತಂತೆ. ಬರುವ ತನಕ ಜೀವಂತವಾಗಿದ್ದ ಹಾವು ಇವರುಗಳ ಏಟು ತಿನ್ನಲಾರದೆ ಸತ್ತುಹೋಯಿತಂತೆ."

ಹೀಗೆಂದು ಸೂರುವು ಕತೆ ಹೇಳಿ ಸುಮ್ಮನಾದ. ಆದರೆ ನಾವು ಸುಮ್ಮನಿರುತ್ತೇವೆಯೇ. ಅದು ಹೇಗೆ ಜೀವಂತವಾಗಿತ್ತು ಹಾವು ಅಷ್ಟು ದಿವಸ. ಆದಕ್ಕೆ ಗಾಳಿಯೇನೋ ದೊರಕಿರಬಹುದು. ಆದರೆ ಆಹಾರ ಎಲ್ಲಿಂದ ಬಂತು ಎಂದು ಕೇಳಿದೆವು. ಮಲಯಾಳ ತಾಂತ್ರಿಕ ಮಾಂತ್ರಿಕರ ಊರು. ಅಲ್ಲಿ ಏನೇನೊ ಸಾಧ್ಯ. ಬೆಂಡನ್ನೇ ತಿನ್ನುತ್ತಾ ಬದುಕಿತ್ತೇನೋ ನನಗೇನು ಗೊತ್ತು ಎಂದು ಸೂರುವು ಸಮಾಧಾನ ಹೇಳಿದ.



# "ಬಂಗಾರ ಬಾಯಮ್ಮ"

ಒಂದಾನೊಂದು ಕಾಲದಲ್ಲಿ, ಯುದ್ಧಕ್ಕೆ ಮುಂಚೆ, ಒಂದು ಹೆಣ್ಣುಮಗುವು ಒಂದಾನೊಂದು ಮನೆಯಲ್ಲಿ ಹುಟ್ಟಿತು. ಮಗುವೇನೋ ಎಲ್ಲಾ ಹೆಣ್ಣುಮಕ್ಕಳಂತೆಯೇ ಪುಟ್ಟದಾಗಿ ಹುಟ್ಟಿತ್ತು. ಹೊಂಬಣ್ಣದ ಮೈಯಿ. ಕಾರ್ಕೂದಲು, ರೋದನ ವದನ, ಬತ್ತಿದ ಮೂಗು, ಮುಖ್ಯ ಎಲ್ಲಾ ಹುಟ್ಟಿದ ಮಕ್ಕಳಂತೆಯೇ ಇತ್ತು. ಆದರೆ ಅದೇ ಸಮಯದಲ್ಲಿ ಕುಬೇರನು ಗಾಳಿ ಸಂಚಾರಕ್ಕೆಂದು ಈ ಮನೆಯ ಹತ್ತಿರ ಹಾರಾಡುತ್ತಿದ್ದ. ಅವನನ್ನು ಯಾರೂ ನೋಡಲಿಲ್ಲ. ಯಾಕೆಂದರೆ ಅವನು ಅದೃಶ್ಯನಾಗಿ ಓಡಾಡುತ್ತಿದ್ದ. ಹಾಗಿಲ್ಲದೇ ದೃಶ್ಯನಾಗಿ ಓಡಾಡುತ್ತಿದ್ದರೆ ಸರಕಾರದವರು ವರಮಾನ ತೆರಿಗೆ ಹಾಕಿ ಅವನನ್ನು ಪಾಪರು ಮಾಡಿಬಿಡುತ್ತಿದ್ದರು, ಅಂದಮೇಲೆ ಕುಬೇರನಾಗಿ ಏನು ಪ್ರಯೋಜನ. ಅಂತೂ ಇಂತೂ ಅದೃಶ್ಯನಾಗಿ ಓಡಾಡುತ್ತಿದ್ದ ಕುಬೇರ ಈ ಹೆಣ್ಣು ಮಗುವಿನ ಅಳುವನ್ನು ಕೇಳಿ, ಅದರ ಅಳು ನಿಲ್ಲಿಸುವುದಕ್ಕೆಂದು ಒಂದು ವರ ಕೊಟ್ಟ. "ನೀನು ಮಾತನಾಡಿದರೆ ಬಾಯಿಂದ ಬಂಗಾರದ ತುಂಡುಗಳು ಬೀಳಲಿ" ಎಂದು. ಮಗುವಿಗೇನು ಗೊತ್ತು ಇದೆಲ್ಲಾ. ಯಾರೊ ಗಾಳಿಯಲ್ಲಿ ಹೋಗುತ್ತಿದ್ದವರು ಕಿವಿಯಲ್ಲಿ ಮಾತನಾಡಿದ ಹಾಗಾಯಿತು. ಆ ಕಡೆ ತಿರುಗಿ ಈ ಕಡೆ ತಿರುಗುವಲ್ಲಿ ಯಾರೂ ಕಾಣಿಸಲಿಲ್ಲ. ಅಳುವೂ ನಿಂತುಹೋಯಿತು.

ಮಗುವಿಗೆ ಹತ್ತು ದಿನವಾಯಿತು. ಹೊಂಬಣ್ಣದ ಮಗುವಿಗೆ ಅಜ್ಜಿಯ ಹೆಸರನ್ನಿಟ್ಟು ಬಂಗಾರಿ ಎಂದು ಕರೆದರು. ಮೇಲುಗಚ್ಚೆ ಸಂಪ್ರದಾಯದ ಸ್ವದೇಶಸ್ಥರಾದ್ದರಿಂದ, ಬಂಗಾರಬಾಯಿ ಎಂದು ನಾಮಕರಣ ಮಾಡಿದರು.

ಬಂಗಾರಿಯು ಎಲ್ಲ ಮಕ್ಕಳಂತೆಯೇ ಬೆಳೆದಳು. ಕಡೆಗೆ ದೊಡ್ಡವಳೂ ಆದಳು. ಮಿಂಚುತ್ತಿರುವ ಕಣ್ಣುಗಳು ಕಂಚಿನಂತಹ ದೇಹ, ದೊಡ್ಡಂಚಿನ ಸೀರೆ, ಆರತಿಗೆ ಹಸೆಯ ಮೇಲೆ ಕುಳಿತಿದ್ದಾಳೆ. ಮುತ್ತೈದೆಯರೂ ಆರತಿ ಎತ್ತಿದರು. ಆರತಿ ಎತ್ತುವಾಗ ಹಾಡು ಹೇಳಿದರು, ಚೆನ್ನಾಗಿಯೇ ಹಾಡು ಹೇಳಿದರು. 'ಅಯ್ಯೋ ಎಷ್ಟು ಚೆನ್ನ' ಎಂದಳು ಬಂಗಾರೀ ಆರತೀ ತಟ್ಟೆಗೆ ಮೂರು ಬಂಗಾರದ ತುಂಡುಗಳು ಬಿದ್ದುವು. ಎಲ್ಲರಿಗೂ ಆಶ್ಚರ್ಯ ತೆಗೆದು ನೋಡುತ್ತಾರೆ ಒಂದೊಂದೂ ಬಂಗಾರದ ಲಕ್ಷ್ಮೀ ಕಾಸು. ಆಗಲೇ ತಾಯಿಗೆ ದುಃಖ. ಅಯ್ಯೋ ಸವರನ್ ಬೀಳಬಾರದೆ ಮಾತನಾಡುವಾಗ ಎಂದು, ಎಲ್ಲೋ ಇದ್ದ ತಂದೆಗೂ ಇದು ತಿಳಿಯಬಂತು. ಆತನು ಬಂದು 'ಚೆನ್ನಾಗಿದ್ದೀಯಾ ಬಂಗಾರೀ, ನಿನಗೇನು ಬೇಕು' ಎಂದ 'ಏನೂ ಬೇಡಪ್ಪಾ' ಎಂದಳು. ಎರಡು ಚಿನ್ನದ ಕಾಸು ಬಿತ್ತು. "ಬಾಯಿತುಂಬ ಮಾತನಾಡಮ್ಮಾ, ನುಂಗಿಕೊಂಡು ನುಂಗಿಕೊಂಡು ನಾಚಿಕೆಪಡಬಾರದು" ಎಂದು ತಂದೆಯು ಬುದ್ಧಿವಾದ ಹೇಳಿದ.

ಈ ಸೋಜಿಗವೂ ರೂಢಿಯಾಗಿ ಹೋಯಿತು. ಇದರಿಂದ ಅಷ್ಟಾಗಿ ಸುಖವೇನೂ ಉಂಟಾಗಲಿಲ್ಲ. ಮೊದಲನೆಯದಾಗಿ ಸರಕಾರದ ತೆರಿಗೆಗಾರರು ದಿನಾಲೂ ಮನೆಗೆ ಬರಲಾರಂಭಿಸಿದರು. ಹರಿಕಥೆ ದಾಸರು, ಅನಾಥ ಸಂಸ್ಥೆಗಳವರು, ಬಡ ಹುಡುಗರು, ವಿದ್ಯಾರ್ಥಿಗಳು ಇತ್ಯಾದಿಗಳು ಹಗಲೂ ರಾತ್ರಿ ಮನೆಗೆ ಬಂದು ಕಾಡುತ್ತಿದ್ದರು. ನಮ್ಮ

ಸ್ಕೂಲಿಗೆ ಕಳುಹಿಸಿ, ನಾವು ಸಂಗೀತ ಹೇಳಿಕೊಡುತ್ತೇವೆ ಎಂದು ಪಾಠಕರು ಬೇರೆ. ಇದೆಲ್ಲವನ್ನೂ ತಪ್ಪಿಸಲಿಕ್ಕೆಂದು ಬಂಗಾರಿಯ ತಂದೆಯು ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಮನೆಯಲ್ಲೇ ಸ್ನೇಹಿತರನ್ನು ಕರೆದು ತಂದು ಇಸ್ಪೇಟ್ ಆಟಕ್ಕೆ ಶುರು ಮಾಡಿದನು. ಒಂದು ಮೋಟಾರನ್ನು ಕೊಂಡನು, ಹೊಸ ಮನೆಯೊಂದನ್ನು ಕಟ್ಟಿಸಿದನು. ಆದರೆ ಬಂಗಾರಿಯು ಎಷ್ಟೋವೇಳೆ, ತಂದೆಯ ಬಂಧನವನ್ನು ಸಹಿಸಲಾರದೆ, ಮಾತಾಡದೆ ಕುಳಿತುಬಿಡುತ್ತಿದ್ದಳು. ಒಮ್ಮೆ ಹುರಿಗಾಳು ಮುಕ್ಕುತ್ತ ಕುಳಿತು ಅರ್ಧಗಂಟೆಯಾದರೂ ಒಂದು ಕಾಸನ್ನೂ ಹೊರಡಿಸಲಿಲ್ಲ.

ಮದುವೆಯ ಕಾಲ ಒದಗಿತು. ಬಂಗಾರಿಯ ಜಾತಿಯಲ್ಲಿ ವಯಸ್ಕ ವಧೂ ವಿವಾಹವೇ ಸಂಪ್ರದಾಯ. ಮೊದಲನೆಯ ವರನು ಸಂಸ್ಥಾನಾಧೀಶ್ವರರೊಬ್ಬರ ಪುತ್ರ. ವಿಲಾಯಿತಿಯಲ್ಲಿ ಕುದುರೆ ಜೂಜಾಡಿ ಸಂಸ್ಥಾನಾಧೀಶ್ವರರು ರಾಜ್ಯವನ್ನೇ ಕುದುರೇ ಬಾಲಕ್ಕೆ ಕಟ್ಟಿಹಾಕಿದ್ದರು. ಅದನ್ನು ಬಿಡಿಸಿಕೊಳ್ಳಲು ಈ ಸೊಸೆಯು ಸರಿಯೆಂದು ಖುದ್ದು ದರ್ಬಾರಿಗೆ ದರ್ಬಾರೇ ಬಂಗಾರಿಯ ತಂದೆಯನ್ನು ಬೇಟಿಯಾದರು- ಆದರೇನು ಹುಡುಗಿಯ ಬೇಟಿಯು ಸಾರ್ಥಕವಾಗಲಿಲ್ಲ. ರಾಜಕುಮಾರನ ಹಿಂದಿನ ಚರಿತ್ರೆಯನ್ನು ಕೇಳಿದ ಬಂಗಾರಿಯು ಉಹು ಎಂದು ಸನ್ನೆ ಮಾಡಿಯೇಬಿಟ್ಟಳು. ಎರಡನೆಯ ವರನು ಲಕ್ಷಾಧೀಶ್ವರ. ತನ್ನ ವಧುವಿನಿಂದ ಮೂರು ಕಾಸನ್ನೂ ಖರ್ಚು ಮಾಡಿಸುವುದಿಲ್ಲವೆಂದು ಜಂಬ ಕೊಚ್ಚಿಕೊಂಡನು. ತನಗೆ ಕುಬೇರನ ಐಶ್ವರ್ಯವಿದೆಯೆಂದು ಹೇಳಿಕೊಂಡನು. ಅವನ ಜಂಭದ ಮಾತನ್ನು ಕೇಳಿ ಬಂಗಾರಿಗೆ ರೇಗಿಹೋಯಿತು. ತಾಯಿಯ ಹತ್ತಿರ ಹೋಗಿ ಆಗುವುದಿಲ್ಲವೆಂದು ಖಂಡಿತ ಹೇಳಿಯೇಬಿಟ್ಟಳು.

ಮೂರನೆಯ ವರನು ಸ್ಫುರದ್ರೂಪಿ. ರಾಜ್ಯ, ಐಶ್ವರ್ಯಗಳಿಂತ ಕಳಂಕಿತನಾಗಿರಲಿಲ್ಲ. ಕುಬೇರನು ಈ ವರನನ್ನು ಮೆಚ್ಚಿದ್ದಿರಬೇಕು. ಇವನ ನಡಿಗೆ ತೊಡಿಗೆಗಳನ್ನು ಬಂಗಾರಿಯು ಮನಃಪೂರ್ವಕ ಒಪ್ಪಿದಳು. ಎಲ್ಲಕ್ಕಿಂತಲೂ ಹೆಚ್ಚಾಗಿ ಇವನ ಗುಂಗುರು ಕೂದಲನ್ನು ಮೆಚ್ಚಿದಳು, ಇವನಿಗೆ ಸಂಗೀತ ಬಂದರೆ ಖಂಡಿತವಾಗಿಯೂ ಮದುವೆಯಾಗುತ್ತೇನೆಂದಳು. ಸರಿ ಇಬ್ಬರಿಗೂ ಪರಸ್ಪರ ಪರಿಚಯವಾಯಿತು. ಇವನೂ ಸಂಗೀತ ಹೇಳಿದನು. "ನಿನ್ನ ಹಣವಿಲ್ಲದಿದ್ದರೆ ಇನ್ನೂ ಚೆನ್ನಾಗಿತ್ತು" ಎಂದು ಹೇಳಿದನು. ಬಂಗಾರಿಯೂ ಬಾಯ್ತೆರದು ಭಾವೀ ಗಂಡನನ್ನು ನೋಡಿದಳು. "ಬಾಯಿ ತೆರೆದರೆ ತಾನೇ ಹಣ ಬೀಳುವುದು ಇನ್ನುಮೇಲೆ ಮಾತೇ ಆಡುವುದಿಲ್ಲ" ಎಂದಳು. ಹೀಗನ್ನುವಾಗಲೇ ಒಂಭತ್ತು ಚಿನ್ನದ ಕಾಸುಗಳು ಠಣಠಣ ಎಂದು ಬಿದ್ದವು. ಇವನೂ ಸ್ವಾಭಾವಿಕವಾಗಿ ಅವುಗಳ ಮೇಲೆ ಕಾಲಿಟ್ಟನು. ಇದನ್ನು ನೋಡಿದ ಬಂಗಾರಿಯು ಇಂತಹ ಕಾಸಿನಾಶೆಯವನನ್ನು ವರಿಸುವುದಿಲ್ಲ ಎಂದು ಸಂಜ್ಞೆ ಮಾಡಿ ಹೊರಟು ಹೋದಳು.

ಈ ಸಮಯದಲ್ಲೇ ಎಲ್ಲವೂ ತಪ್ಪುತ್ತ ಬಂತು. ಕುಬೇರನು ಮೆಚ್ಚಿದ ವರನನ್ನು ಬಂಗಾರಿಯು ಒಪ್ಪಲಿಲ್ಲವೆಂದೋ ಏನೋ-ಆ ಕ್ಷಣದಿಂದ ಬಂಗಾರಿಯ ಬಾಯಿಂದ

ಬಂಗಾರ ಬರುವುದು ಬಂದಾಯಿತು. ಗ್ರಿವ್ಮನ ಕತೆಗಳಲ್ಲಿ ಈಸಪ್ಪನ ಕತೆಗಳಲ್ಲಿ ಕಾರಣವೇನೂ ಹೇಳಿಲ್ಲ. ಅಂತೂ ವರವು ಮುಕ್ತಾಯವಾಯಿತು.

ಇದು ಬಹಳ ಶೋಚನೀಯವಾದ ವಿಷಯ. ವರವು ಇನ್ನೂ ಕೆಲಸ ಮಾಡುತ್ತಿದ್ದರೆ ಗೀತಾಪಾಠ ಹೇಳಿಕೊಟ್ಟು ಈ ಯುದ್ಧದ ಖರ್ಚನ್ನೆಲ್ಲಾ ಬಂಗಾರಿಯ ಬಾಯಲ್ಲೇ ಬರಿಸಬಹುದಾಗಿತ್ತು. ಈಗ ನಾವುಗಳು ದುಡಿದು ದುಡಿದು ಸಂಪಾದಿಸಿ ಯುದ್ಧೋದ್ಯಮವನ್ನು ಸಾರ್ಥಕಗೊಳಿಸಲೇಬೇಕು.

---



"ಸ್ವಾಮಿ ಇಷ್ಟೆಲ್ಲಾ ಮಾಡ್ತಿರಲ್ಲ, ಈ ಪೆನ್ನನ್ನ ಸ್ವಲ್ಪ ಬಿಚ್ಚಿಕೊಡಿ ನೋಡೋಣ"

# ಕಕ್ಕಾ-ಬಿಕ್ಕಿ

ಬರೆದವರು—"ರಾಮು"

ಕಡೆಗೆ ಭೀಮರಾಯರನ್ನೇ ಸರ್ಕಾರದವರು ಆ ಪ್ರಾಂತ್ಯದ ಶಾಲೆಗಳ ಮುಖ್ಯಾಧಿಕಾರಿಗಳನ್ನಾಗಿ ನೇಮಿಸಿದರು, ಭೀಮರಾಯರದು ನಿರಾಡಂಬರದ ಜೀವನ. ಆಳೂ ಸಹ, ಕುಳ್ಳ-ಕೋಲು-ಕಪ್ಪು ಎಂದ ಮೇಲೆ, ಹೇಗಿರಬೇಕು. ಜರೀ ಇಲ್ಲದ ಬಿಳೀ ರುಮಾಲನ್ನು ಸುತ್ತಿ, ಹಳೇ ತರಹದ 'ಮುಚ್ಚಿದೆ' ಅಂಗಿಗಳನ್ನೇ ತೊಟ್ಟು, ಕಾಲಿನ ದಪ್ಪಕ್ಕೆ ಮಾತ್ರ ಸುತ್ತಳತೆ ಇದ್ದ ಷರಾಯಿಯನ್ನೇ ಧರಿಸಿ, ತಮ್ಮ ವ್ಯವಹಾರಿಕ ಜೀವನವನ್ನು ಸಾಗಿಸುತ್ತಿದ್ದರೇ ವಿನಹ, ತಿಂಗಳಿಗೆ ಸಾವಿರ ರೂಪಾಯಿಗಳನ್ನು ಸೆಳೆವ ಅಧಿಕಾರಿ ತಾವೆಂದು ದರ್ಪವೇ ಆಗಲೀ, ಉಡುಪುಗಳ ವೈಖರಿಯೇ ಆಗಲೀ ಅವರಲ್ಲಿ ಎಂದೂ ತೋರಿ ಬರಲಿಲ್ಲ.

ಶಾಲೆಗಳ ಮುಖ್ಯಾಧಿಕಾರಿಗಳನ್ನಾಗಿ ಭೀಮರಾಯರನ್ನು ನೇಮಿಸಿದಾಗಲೇ, ಆ ಅಧಿಕಾರಿಗಳ ಆಪ್ತ ಗುಮಾಸ್ತೆಯ ಕೆಲಸಕ್ಕೆ ನಮ್ಮ ಶಿವಶಂಕರರನನ್ನೂ ನೇಮಿಸಿದ್ದು;—ತಿಂಗಳಿಗೆ ನಲವತ್ತೈದು ರೂಪಾಯಿ ಸಂಬಳದ ಮೇಲೆ. ಶಿವಶಂಕರ ಹೊಸದಾಗಿ ಎಂ.ಎ. ಮಾಡಿದ್ದ. ಕಾಲೇಜಿನ ಹುರುಪು. ಇಪ್ಪತ್ತೆರಡರ ಪ್ರಾಯ. ಆರಡಿ ಉದ್ದ. ಅದಕ್ಕೆ ಸರಿಯಾದ ಗಾತ್ರ. ಮೇಲೆ ರಸಿಕ. ಇನ್ನೂ ಲಗ್ನ ವಿಲ್ಲ. ಆಧುನಿಕ ಉಡುಪುಗಳ ಠೀವಿಗೂ, ಶೃಂಗಾರಕ್ಕೂ ಮೊದಲಿನಿಂದಲೂ ಮನಸೋತಿದ್ದರಿಂದ, ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವಿನವನಾಗಿದ್ದ. ಶಿಲ್ಕು ಷರಟು ಟೊಟಾಲ್ ಟೈ, ಸ್ಟಿಫ್ ಕಾಲರು, ಸರ್ಜು ಸೂಟು, ಭಂಗಾರದ ಕಟ್ಟಿನ ತಂಪೆಸವ ಕನ್ನಡಕ, ರೇಷ್ಮೆ ಕೈ ವಸ್ತ್ರ, ಕೈಕೋಲು, 'ಒಕ್' ಷೂ, ಇವುಗಳಿಲ್ಲದೆ ಕಛೇರಿಯ ಮೆಟ್ಟಲನ್ನೇ ಮುಟ್ಟುತ್ತಿರಲಿಲ್ಲ.

ಭೀಮರಾಯರಿಗೆ ಹೊಸ ಹುದ್ದೆ ಆದ ಒಂದು ವಾರದಲ್ಲೇ, ಅವರು, ದೂರದ ಜಿಲ್ಲೆಯ ಮೂಲೆಯ ಹಳ್ಳಿಯೊಂದರಲ್ಲಿ, ಹೊಸ ಶಾಲೆಯ ಪ್ರಾರಂಭೋತ್ಸವವನ್ನು ನೆರೆವೇರಿಸಬೇಕಾಗಿ ಬಂದಿತು. ಅಧಿಕಾರಿಗಳ ಪ್ರವಾಸ ಅಂದರೆ ಅವರ ಆಪ್ತ ಗುಮಾಸ್ತರುಗಳ ಯಾತ್ರೆಯೂ ಇಲ್ಲದೆ ಆಗುತ್ತದೆಯೇ! ಶಿವಶಂಕರನೂ ಭೀಮರಾಯರೊಂದಿಗೆ ಹೋಗಬೇಕಾಗಿ ಬಂದಿತು. ಶಿವಶಂಕರನ ಅದೃಷ್ಟಕ್ಕೆ, ಭೀಮರಾಯರು ಕಾರಿನಲ್ಲೇ ಹಳ್ಳಿಗೆ ಹೋಗುವುದಾಗಿ ನಿಶ್ಚಯಿಸಿದರು,-ಶಿವಶಂಕರನೂ ಅವರೊಡನೆ ಕಾರಿನಲ್ಲೇ ಹೋಗಬಹುದಾಗಿತ್ತು.

ಶಿವಶಂಕರರನ್ನು ಕಂಡರೆ ಭೀಮರಾಯರಿಗೆ ತುಂಬಾ ಆದರ. ಅಂತಲೇ ಅವರು ಅವನನ್ನು ತಮ್ಮ ಜತೆಯಲ್ಲೇ ಪಕ್ಕವಲ್ಲೇ ಕಾರಿನಲ್ಲಿ ಕೂಡಿಸಿಕೊಂಡು ಕರೆದುಕೊಂಡು ಹೋದರು. ಬೆಳಗ್ಗೆ ಹೊರಟರೆ ಸಂಜೆ ಹೊತ್ತಿಗೆ ಸೇರುವಷ್ಟು ದೂರವಿತ್ತು, ಆ ಹಳ್ಳಿ. ಇವರುಗಳು ಬೆಳಗ್ಗೆ ಜಾಗ್ರತೆಯೇ ಹೊರಟರೂ, ಕಾರು ಒಂದೆರಡು ಕಡೆ ಅನಿರೀಕ್ಷಿತವಾಗಿ ತೊಂದರೆ ಕೊಟ್ಟಿದ್ದರಿಂದ ಹಳ್ಳಿ ಮುಟ್ಟುವಾಗ ಮುಸಕು ಮುಸಕಾಗಿತ್ತು. ಹೊಸ ಅಧಿಕಾರಿಗಳು ಮೊದಲನೆಯ ಸಲ ತಮ್ಮ ಹಳ್ಳಿಗೆ ಬಂದು, ಹೊಸ

ಶಾಲೆಯ ಪ್ರಾರಂಭೋತ್ಸವ ನೆರವೇರಿಸು ತ್ತಾರೆಂಬ ಕಾರಣ, ಆ ಹಳ್ಳಿಯವರೆಲ್ಲರೂ ಗುಂಪಾಗಿ ರಸ್ತೆಯ ಪಕ್ಕದಲ್ಲಿ ನಿಂತು ಕಾರಿಗಾಗಿ ದಾರಿ ಕಾಯುತ್ತಿದ್ದರು. ಶಾಲೆಯ ಉಪಾಧ್ಯಾಯರುಗಳಾಗಬೇಕಾಗಿದ್ದವರು ಹಾರ ತುರಾಯಿಗಳನ್ನೂ ಹಣ್ಣಿನ ತಟ್ಟೆಗಳನ್ನೂ ಹಿಡಿದುಕೊಂಡು ನೂತನ ಅಧಿಕಾರಿಗಳಿಗೆ ಸ್ವಾಗತವೀಯಲು ಕಾದಿದ್ದರು. ಬ್ಯಾಂಡನ್ನು ಜೇರೆ, ಪಟ್ಟಣದಿಂದ, ತರಿಸಲಾಗಿತ್ತು.

ಆ ಹಳ್ಳಿ, ಕಾರಿಗೆ ಶಿವಶಂಕರನು ಕೂತಿದ್ದ ಕಡೆಗೆ ಇತ್ತು. ಕಾರು ಒಂದು ಚಪ್ಪರದಡಿ ನಿಂತೊಡನೆ ಬ್ಯಾಂಡು ಪ್ರಾರಂಭವಾಯ್ತು. ಶಿವಶಂಕರನು ಭೀಮರಾಯರಿಗೆ ದಾರಿ ಬಿಡಬೇಕೆಂಬ ಉದ್ದೇಶದಿಂದ ತನ್ನ ಹ್ಯಾಟನ್ನು ಸರಿಮಾಡಿಕೊಂಡು, ಕೈಕೋಲನ್ನು ಹಿಡಿದುಕೊಂಡು, ಕಾರಿನ ಬಾಗಿಲನ್ನು ತೆಗೆದು, ಕೆಳಗಿಳಿದನೋ ಇಲ್ಲವೋ, ಬಿತ್ತು ಹಾರ ಅವನ ಕತ್ತಿಗೆ. ಬ್ಯಾಂಡು ಹೆಚ್ಚಿಗೆ ಧ್ವನಿ ಮಾಡಿತು. ಹಳ್ಳಿಯವರೆಲ್ಲಾ ಒಟ್ಟಿಗೆ ಕೈ ಚಪ್ಪಾಳೆ ತಟ್ಟಿದರು. ಇಷ್ಟಾಗುವುದರೊಳಗೆ ಒಬ್ಬರು ಶಿವಶಂಕರನ ಕೈಯಲ್ಲಿ ತುರಾಯಿಯನ್ನು ತುರುಕಿದ್ದರು. ಶಾಲೆಯ ಮುಖ್ಯೋಪಾಧ್ಯಾಯರಾಗಬೇಕಾಗಿದ್ದವರು ಹಣ್ಣಿನ ತಟ್ಟೆಯನ್ನು ಶಿವಶಂಕರನ ಮುಖಕ್ಕೆ ಹಿಡಿದೆತ್ತಿ "ಸ್ವೀಕರಿಸಬೇಕು ಸ್ವಾಮಿ" ಎಂದು ಬೇಡಿದರು.

ಅದೇ ಸಮಯದಲ್ಲಿ, ಆ ಹೊಸ ಶಾಲೆಯ ಂಗುಮಾಸ್ತೆಯಾಗಬೇಕಾಗಿದ್ದವನು ಕಾರಿನ ಇನ್ನೊಂದು ಕಡೆಗೆ ಬಂದು, ಭೀಮರಾಯರಿಗೆ "ಇಳೀರಿ, ಕೆಳಗೆ. ಸಾಹೇಬರು ಕೆಳಗೆ ಇಳಿದರೂ ನೀವು ಕೂತೇ ಇದ್ದೀರಲ್ಲ, ಸಾಹೇಬರ ಹಾಗೆ. ನೀವೇ ಅಲ್ವೆ—ಶಿವಶಂಕರರು, ಹೊಸದಾಗಿ ಕೆಲಸ ಆಯ್ತಲ್ಲ. ನಾನೂ ಆ ಕೆಲಸಕ್ಕೆ ದರಖಾಸ್ತು ಹಾಕಿದ್ದೆ ನೋಡಿ. ನಿಮಗೆ ಸಿಕ್ಕಿತು. ನನಗೆ ಸಿಗಲಿಲ್ಲ" ಎಂದು ಹೇಳಿದನು.

ಕೊರಳಲ್ಲಿ ಹಾರ, ಕೈಯಲ್ಲಿ ತುರಾಯಿ ವೇಷಧಾರಿಯಾದ ಶಿವಶಂಕರನು, ಕಾರಿನಲ್ಲಿ ಬೆಪ್ಪಾಗಿ ಕುಳಿತಿದ್ದ ಭೀಮರಾಯರೂ ಒಬ್ಬರ ಮುಖವನ್ನೊಬ್ಬರು ನೋಡಿ ಕಕ್ಕಾ—ಬಿಕ್ಕಿ!

—o—

ಇಂಗ್ಲೀಷಿನವರಿಗೆ ಬಗ್ಗಿ ನಮಸ್ಕಾರ ಮಾಡಲು ಬರುವುದೇ ಇಲ್ಲವಂತೆ—ಭಾರತೀಯರಂತೆ—

—ಅಲ್ಲವೆ ಹೇಗೆ. ಬಗ್ಗಿದರೆ, ಬೆನ್ನು ಹತ್ತುವ ಹಲವಾರು ಜನಾಂಗಗಳಿರುವಾಗ.

* * *

ನಮ್ಮ ವೈಸ್ರಾಯರನ್ನು ಸೆಕ್ರೆಟರಿ ಆಫ್ ಸ್ಟೇಟ್ ಕೆಲಸಕ್ಕೆ ಏರಿಸಿದ್ದಾರೆಂಬ ಸುದ್ದಿಗೆ ಏನೂ ಬುಡವಿಲ್ಲ.

# ಶಿ ಶು ವಿ ಹಾ ರ

ನಮ್ಮೂರು ಶಿಶುವಿಹಾರದಲ್ಲಿ ಮೊನ್ನೆ ಒಂದು ಪ್ರಕರಣ ನಡೆಯಿತು. ಸಾಮಾನ್ಯವಾಗಿ ಅಲ್ಲಿ ಓದುವ ಹುಡುಗರೂ ಹುಡುಗಿಯರೂ ನನ್ನಂತಹ ದೊಡ್ಡಮನುಷ್ಯರ ಮಕ್ಕಳೇ. ಮೊನ್ನೆ ಅದರ 'ಬಿ' ಕ್ಲಾಸಿನಲ್ಲಿ ನೀಲಮ್ಮನವರು ತಾಳೀಕೋಟೆ ಯುದ್ಧದ ವಿಷಯವನ್ನು "ಮಕ್ಕಳ ಮಿದುಮನವನ್ನು ಸೂರೆಗೊಳ್ಳುವ ಸುಲಭ ಶೈಲಿ"ಯಲ್ಲಿ ವಿವರಿಸುತ್ತಿದ್ದರಂತೆ. ತಕ್ಷಣ ಅವರು ಪಾಠ ಹೇಳುತ್ತಿದ್ದ ಕೊಠಡಿಯೇ ಒಂದು ತಾಳೀಕೋಟೆಯಾಗಿ ಪರಿಣಮಿಸಿತು. ಒಂದು ಮಂಡರ್ಕಪ್ಪೆ ಮಕ್ಕಳ ನಡುವೆ ಓಡಾಡಿದ್ದೇ ಈ ಅವಾಂತರಕ್ಕೆ ಕಾರಣ ?

ಮಕ್ಕಳೆಲ್ಲರೂ ಗಾಬರಿಗೊಂಡು ನಾನಾ ರೀತಿಗಳಲ್ಲಿ ಕಿರಿಚುತ್ತಾ ಮೂಲೆ ಸೇರಿದರು. ನೀಲಮ್ಮನವರು ಮೇಜಿನ ಮೇಲೆ ಹತ್ತಿ ನಿಂತು "ಹೆದರಬೇಡಿ! ಹೆದರಬೇಡಿ! ಹೆದರಬೇಡಿ!" ಎಂದು ಅರಚುತ್ತಾ ಮಕ್ಕಳನ್ನು ಮತ್ತಷ್ಟು ಗಾಬರಿಗೊಳಿಸಿದರು. ಮಂಡರ್‌ಕಪ್ಪೆ ಮಾತ್ರ ಮಾತನಾಡದೆ ಓಡಾಡುತ್ತಿತ್ತು. ಮೇಡಂನವರ ಸಹಾಯವಿಲ್ಲದೆ ಬಾಗಿಲಿನ ಚಿಲಕ ತೆಗೆಯಲು ಮಕ್ಕಳ ಕೈಯಿಂದ ಸಾಧ್ಯವಾಗಲಿಲ್ಲ. ಮೇಡಂ ಮೇಜಾರೂಢರಾಗಿ ಕೂಗಾಡುತ್ತಿದ್ದರು !

ಆಗ, ನನ್ನ ಮಗ—ನಾಗರಾಜು—ನನ್ನ ಮಾನ ತನ್ನ ಮಾನ ಉಳಿಸಿದನಂತೆ. ಮೇಜಿನ ಮೇಲಿದ್ದ ದೊಡ್ಡ ರಿಜಿಸ್ಟರನ್ನು ಎರಡು ಕೈಯಿಂದಲೂ ಎತ್ತಿ ತಂದು ಮಂಡರ್ಕಪ್ಪೆಯ ಸನ್ನಿಧಾನಕ್ಕೆ ಎದೆಗೆಡದೆ ಮುಂದುವರಿದು ಗುರಿಯಿಟ್ಟು ಅದನ್ನು ಎಸೆದನಂತೆ. ಕೂಡಲೇ ಸುಬ್ಬಮ್ಮನವರು ಕೆಳಕ್ಕಿಳಿದರು. ಬಾಗಿಲು ತೆಗೆದು ಮಕ್ಕಳನ್ನು ಮನೆಗೆ ಕಳುಹಿಸಿ ಜವಾನನಿಂದ ಮಂಡರ್ಕಪ್ಪೆಯ ಕಳೇಬರವನ್ನು ಹೊರಕ್ಕೆ ಸಾಗಿಸಿದರಂತೆ.

ಸಂಜೆ ಶಿಶುವಿಹಾರದ ಮೂರು ಮೇಡಂಗಳೂ ಸಭೆ ಸೇರಿ ನಾಗರಾಜುವಿನ ಎದೆಗಾರಿಕೆಯನ್ನು ಕೊಂಡಾಡಿ, ಅವನನ್ನು ಬೇಬಿ ಅಲೆಕ್ಸಾಂಡರ್, ಸಣ್ಣ ಸೀಸರ್, ಮರಿ ಮಂಟ್‌ಗಾಮುರಿ ಎಂದು ಮುಂತಾಗಿ ಹೊಗಳಿದರಂತೆ. ಮರುದಿನ ಶಿಶುವಿಹಾರದ ಮಕ್ಕಳ ಒಂದು ಮಹಾ ಸಭೆಯಲ್ಲೆ ನಾಗರಾಜುವಿಗೆ ಒಂದು ಪೌಂಡು ಚಾಕಲೇಟನ್ನು ಶಿಶುವಿಹಾರದ ಸಂಚಾಲಕರು ತಮ್ಮ ಸ್ವಂತ ಖರ್ಚಿನಿಂದಲೇ ಬಹುಮಾನವಾಗಿ ಕೊಟ್ಟರು. ಮಕ್ಕಳ ಮನಸ್ಸಿನಲ್ಲಿ ಬಹುಮಾನ ವಿನಿಯೋಗದಿಂದ ದ್ವೇಷಾಸೂಯೆಗಳು ಉತ್ಪತ್ತಿ ಆಗುತ್ತವೆ—ಎಂದು ನಾನು ಎಲ್ಲೋ ಓದಿದ್ದೆ. ಆದರೂ, ಸಂಜೆ ನಾಗರಾಜು ಬಂದು ನನಗೊಂದು ಚಾಕಲೇಟು ಕೊಟ್ಟು ನಡೆದ ಸಂಗತಿ ಹೇಳಿದಾಗ ನನಗೆ ಆಶ್ಚರ್ಯವೂ ಆನಂದವೂ ಏಕಕಾಲದಲ್ಲಿ ಉಂಟಾಯಿತು. ನನ್ನ ಹಿರಿಯರು ವಿಜಯನಗರದಲ್ಲಿ ದಂಡನಾಯಕರಾಗಿಯೂ ಮಂತ್ರಿಗಳಾಗಿಯೂ ಇದ್ದರೆಂದು ಕೇಳಿ ಬಲ್ಲೆ. ಅದು ನಿಜವಿರಬೇಕೆಂದು ನಾಗರಾಜುವಿನ ನಡತೆಯಿಂದ ಅರಿತುಕೊಂಡೆ. ಹಠಾತ್ತನೆ ಕಾಣಿಸಿಕೊಂಡ ಮಂಡರ್‌ಕಪ್ಪೆಯನ್ನು ಧೈರ್ಯವಾಗಿ ಕೊಂದ ಮಗನನ್ನು ನಾನೂ ಮುದ್ದಾಡಿಸಿದೆ.

ಅದರಾಚೆ ದಿನ ಶಿಶುವಿಹಾರದ ಸಂಚಾಲಕರು ನನ್ನನ್ನೂ ಶಾಲೆಗೆ ಬರಹೇಳಿದರು. ನನ್ನ ಹೊಸ ಪಲ್ಲಿಯನ್ನು ಕತ್ತಿಗೆ ಸುತ್ತಿಕೊಂಡು ನಾನು ಅಲ್ಲಿಗೆ ಹೊರಟೆ. ಮೂರು ಮಹಿಳೆಯರೂ ಆಗಲೇ ಅಲ್ಲಿ ನೆರೆದಿದ್ದರು. ''ಇನ್ನೇನೂ ಇಲ್ಲ. ನಿಮ್ಮ ಹುಡುಗನಿಗೆ ನಾವು ಬಹುಮಾನ ಗಿಹುಮಾನ ಕೊಟ್ಟಿದ್ದಾಯಿತು. ಆದರೂ ನಿಮ್ಮನ್ನೂ ಒಂದು




ಸಾರಿ ನೋಡುವುದು ಮೇಲು ಅಂತ ಕರೆಸಿದುವು. ಈ ದಿನ ಬೆಳಿಗ್ಗೆ ನಾಗರಾಜುವನ್ನ ವಿಚಾರಿಸಿದೆವು. ಆಗ ಅವನು ''ನಾನೇ ಮಂಡರಗಪ್ಪೆಯನ್ನು ಕ್ಲಾಸಿನೊಳಕ್ಕೆ ತಂದೆ; ಸಾಬೂನು ಪೆಟ್ಟಿಗೆಯೊಳಕ್ಕೆ ತುಂಬಿ ತಂದಿದ್ದೆ. ನಾನೇ ಬಾಲಕ್ಕೆ ದಾರ ಕಟ್ಟಿ ಎಳೆದೆ' ಅಂದ. ಇಂತಹ ಪೋಕರಿಗಳನ್ನ ಈ ಶಾಲೆಯಲ್ಲಿರಿಸಿಕೊಳ್ಳುವುದು ಸರಿಯಲ್ಲ....

ಚಾಕಲೇಟಿನ ಬೆಲೆ ಒಂದೂಕಾಲು ರೂಪಾಯಿ ನೀವು ಹಿಂದಕ್ಕೆ ಕೊಡಬೇಕಾಗಿಲ್ಲ. ಆದರೆ....ಆದರೆ, ನಾಳೆಯಿಂದ ನಾಗರಾಜುವನ್ನು ಕಳುಹಿಸಬೇಡಿ....ಅವನ ಬಾಬ್ತು ಫೀಜು ಬಾಕಿ ಆರುರೂಪಾಯಿಯನ್ನೂ ಕಳುಹಿಸಿಕೊಟ್ಟುಬಿಡಿ'' ಎಂದರು ಆ ಮೂವರಲ್ಲಿ ದಪ್ಪನೆಯವರು.

ಮನೆ ಕಡೆಗೆ ಹೋಗುತ್ತಿದ್ದಾಗ ನನ್ನ ಮೆದುಳು ತುಂಬಾ ಕದಡಿತ್ತು. ನಾಗರಾಜುವನ್ನ ಏನು ಮಾಡುವುದು ? ಬೈದರೆ ಸಾಕೆ ? ಹೊಡೆಯಬೇಡವೆ ? ಹೊಡೆಯ ಕೂಡದೆ ? ಒಂದು ದಿನವೆಲ್ಲ ಅನ್ನ ನೀರಿಲ್ಲದೆ ಕತ್ತಲು ಕೋಣೆಯಲ್ಲಿ ಕೂಡಿಸಿದರೆ ? ಅವಳೇನು ಹೇಳುತ್ತಾಳೋ ?—ಎಂದು ಮುಂತಾಗಿ ಚರ್ಚಿಸುತ್ತಾ ಮನೆ ಬಾಗಿಲಿಗೆ ಬಂದೆ. ಅಲ್ಲಿ ಸುಶೀಲೆ ನಿಂತಿದ್ದಳು. ಸುಶೀಲೆ ನಾಗರಾಜುವಿನ ಪ್ರಾಣಸ್ನೇಹಿತೆ ! ಅವರಿಬ್ಬರೂ ನನ್ನ ಹತ್ತಿರ ಒಂದು ದಿನ ಬಂದು 'ನಾವಿಬ್ಬರೂ ಗಂಡ ಹೆಂಡತಿ ಎಂದು ಕಣ್ಣರಳಿಸಿಕೊಂಡು ಕೈ ಚಪ್ಪಾಳೆ ತಟ್ಟಿದರು. ಸುಶೀಲೆಯನ್ನು ಕಂಡಾಗ ನನ್ನ ಕೋಪ ಕೊಂಚ ಅವಳ ಮೇಲೂ ತಿರುಗಿತು.

''ಏನೇ ! ಸುಶೀಲಾ ! ನಿಮ್ಮ ಕ್ಲಾಸಲ್ಲಿ ಮುಂಡರ್ಕಪ್ಪೆ ಬಂತಲ್ಲಾ'' ಅಂದೆ.

''ಊಂ. ಚೆನ್ನಾಗಿತ್ತಲ್ಲಾ ತಮಾಷೆ !''

''ತಮಾಷೆ, ಏನು ?''

''ತಮಾಷೇನೆ ಅದು ! ಕರೀ ಮೇಣದಲ್ಲಿ ನಾಗರಾಜು ಮಾಡಿದ್ದ....ಕರೀ ದಾರ ಕಟ್ಟಿ ಎಳೆದ....ಹ....ಹ....ಹ್ಹ''

''ಏನು ? ಹೀಗೇನೇ ನೀವು ತಮಾಷೆ ಮಾಡುವುದು ಕ್ಲಾಸಿನಲ್ಲಿ....ನೀಲಮ್ಮನವರು ತುಂಬಾ ಹೆದರಿದರಂತೆ !''

''ಊಂ. ಮೇಜಿ ಮೇಲೆ ಹತ್ತಿದ್ದರು.''

"ಇರಲಿ ! ನಾನು ನಾಗರಾಜೂನ ಚೆನ್ನಾಗಿ ಹೊಡೆದು...."

"ಬೇಡ....ಬೇಡ....ನಾನೇ ಹೇಳಿದ್ದು ಅವನಿಗೆ."

"ಏನನ್ನ ?"

"ಕಪ್ಪೆ ಮಾಡು....ದಾರ ಕಟ್ಟು....ಕ್ಲಾಸಿಗೆ ತಾ....ಮೇಡಂ ಹೆದರುತ್ತಾರೆ.... ಅಂತ. ಅವನು ಆಗೋಲ್ಲ ಅಂದ. ಹಾಗಾದರೆ ನಿನ್ನನ್ನ ಮದುವೆ ಮಾಡಿಕೊಳ್ಳೋದಿಲ್ಲ, ಅಂದೆ. ಆಗ ಹೂಂ ಅಂದ."

"ನೀವೆಲ್ಲಾ ಹೆದರಿದರಂತೆ !"

"ಇಲ್ಲ ! ಇಲ್ಲ ! ನಮಗೆಲ್ಲಾ ಗೊತ್ತಿತ್ತು ! ಸುಮ್ಮಸುಮ್ಮನೆ ಕಿರಿಚಿದೆವು, ಅಷ್ಟೆ !"

"ಎಲ್ಲರಿಗೂ ಗೊತ್ತಿತ್ತೆ ? ಹುಡುಗರೆಲ್ಲರಿಗೂ ಗೊತ್ತಿತ್ತೆ ?"

"ಎಲ್ಲರಿಗೂ ಗೊತ್ತಿತ್ತು."

''ಹಾಗಾದರೆ ಚಾಕಲೇಟು ?''

"ನಾಗರಾಜುಗೆ ಕೊಟ್ಟ ಚಾಕಲೇಟನ್ನ ನಾವೆಲ್ಲರೂ ಹಂಚಿಕೊಂಡುವು. ಎಲ್ಲರಿಗೂ ನಾಲ್ಕು ನಾಲ್ಕು ಬಂತು."

ಮನೆಯೊಳಕ್ಕೆ ಸುಶೀಲನನ್ನೂ ಕರೆದುಕೊಂಡು ಹೋದೆ. ಇಬ್ಬರಿಗೂ ಇನ್ನಷ್ಟು ಚಾಕಲೇಟು ತರಿಸಿಕೊಟ್ಟೆ.

—ನಾ. ಕ.

# ಸುಬ್ಬಮ್ಮನ ಸಂಸಾರ

ದೊಡ್ಡ ಮಗಳಾಪುರದಲ್ಲಿ ತಮ್ಮಯ್ಯನವರು ಅಂದರೆ ಎಲ್ಲರಿಗೂ ಗೊತ್ತು. ಅವರೇ ಸುಬ್ಬಮ್ಮನವರ ಗಂಡ! ಸುಬ್ಬಮ್ಮನವರ ಮನೆಯಲ್ಲಿ ಒಂದು ಅಲ್ ಸೇಷಿಯನ್ ನಾಯಿ ಬೇರೆ ಇತ್ತು. ನಾಯಿಗೂ ಸುಬ್ಬಮ್ಮನವರಿಗೂ ತಮ್ಮಯ್ಯನವರ ಮೇಲೆ ಬಹು ಪ್ರೀತಿ. ಸುಬ್ಬಮ್ಮನವರನು ಮಾತನಾಡಿಸುವಾಗಲೂ ಅಲ್‌ಸೇಷಿಯನ್ನಿನ ತಲೆ ಸವರುವಾಗಲೂ, ಥಟಕ್ಕನೆ ಬಲಕ್ಕೆ ತಿರುಗಿ, "ಓ! ತಮ್ಮಯ್ಯನವರೇ! ಇಲ್ಲೇ ಇದೀರಾ! ಕಾಣಲಿಲ್ಲ! ಕ್ಷಮಿಸಬೇಕು! ಕ್ಷಮಿಸಬೇಕು. ಆರೋಗ್ಯವೇ?" ಎಂದು ಕೇಳೇ ಕೇಳುತ್ತೀರಿ. ಕೇಳದೆ ವಿಧಿಯಿಲ್ಲ.

ದಿನ ಬಿಟ್ಟು ದಿನ ದೊಡ್ಡಮಗಳಾಪುರದಲ್ಲಿ ತಮ್ಮಯ್ಯನವರಿಗೆ ಪರಾನ್ನ ಭೋಜನದ ಲಾಭ! ಏಕೆಂದರೆ, ಸುಬ್ಬಮ್ಮನವರನ್ನು ಕಂಡರೆ ಎಲ್ಲರಿಗೂ ಗೌರವ, ಮರ್ಯಾದೆ, ವಿಶ್ವಾಸ. ಸರಿ! ತಮ್ಮಯ್ಯನವರನ್ನು ಬಿಟ್ಟರೆ ಹೇಗೆ? ಮಿಸ್ಟರ್ ಮತ್ತು ಮಿಸೆಸ್ ಅಂತ ಆಹ್ವಾನಿಸಿ, ಮಿಸೆಸ್‌ನೊಂದಿಗೆ ಸರಸಸಲ್ಲಾಪ ಕುಶಲಪ್ರಶ್ನೆ ಇತ್ಯಾದಿ. ತಮ್ಮಯ್ಯನವರಿಗೆ ಬರಬರುತ್ತಾ ಬೇಜಾರಾಯಿತು; ರೇಗಿತು; ಜೀವನದ ಮೇಲೆಯೇ ಜುಗುಪ್ಸೆ ಉಂಟಾಯಿತು. ಆದರೂ, ಶಿರೋಲಿಖಿತವನ್ನು ತೊಡೆದು ಹಾಕಬಲ್ಲವರು ಯಾರು? ಅಲ್‌ಸೇಷಿಯನ್ನಿನ ತಲೆ ಸವರುತ್ತಾ, ಅದರ ಸರಪಳಿಯನ್ನು ಹಿಡಿದು, ಅವರೂ ಕುಳಿತುಕೊಳ್ಳುತ್ತಿದ್ದರು.

ಯಾರ ಮನೆಗೆ ಹೋದರೂ, ತಮ್ಮಯ್ಯನವರೂ ಅಲ್‌ಸೇಷಿಯನೂ, ಬಾಯಿ ಬಿಡುತ್ತಿರಲಿಲ್ಲ. "ಓ! ತಮ್ಮಯ್ಯನವರೇ! ಇಲ್ಲೇ ಇದೀರಾ!....ಕಾಣಲಿಲ್ಲ! ಕ್ಷಮಿಸಬೇಕು. ಆರೋಗ್ಯವೇ?" ಇಷ್ಟೇ ಆ ಮನೆಯವರ ಮಾತು. ಅದಕ್ಕೆ ತಮ್ಮಯ್ಯನವರ ಉತ್ತರವೂ ಕೂಡ ಇಷ್ಟೆ, "ಏನೋ, ತಮ್ಮ ದಯೆ! ಇಷ್ಟರವರೆಗೆ" ಅಲ್ಲಿಗೆ



ಅವರ ಬಾಯಿಗಾರಿಕೆ ಮುಗಿಯಿತು. ಮಿಕ್ಕೆಲ್ಲ ಸಂಭಾಷಣೆ ಸುಬ್ಬಮ್ಮನವರದು. ಅವರ ಲೋಕ ಪರಿಜ್ಞಾನ, ಸಾಹಿತ್ಯಾಭಿಲಾಷೆ, ಕಲಾ ಪ್ರೇಮ, ವಿಜ್ಞಾನ ದೃಷ್ಟಿ, ಜನಸೇವಾತತ್ಪರತೆ, ಆದರ್ಶ ಸಾಧನೆ, ರಚನಾತ್ಮಕ ಯೋಜನೆ, ನವವಾತಾವರಣ ನಿರ್ಮಾಣೋತ್ಸಾಹ, ಇವುಗಳ ಮುಂದೆ ಯಾರೂ ನಿಲ್ಲಲಾರರು. ಇಂ

ಗ್ಲಿಷು ಗೊತ್ತಿದ್ದರೂ ಮೂರು ಗಂಟೆಗಳ ಕಾಲ ಪರಭಾಷೆಯ ಒಂದು ಮಾತನ್ನೂ ಕೂಡ ಸಾಲ ತೆಗೆದುಕೊಳ್ಳದೆ ತಾವೊಬ್ಬರೇ ಮಾತುಕತೆಯನ್ನು ಸಾಗಿಸಬಲ್ಲ ಸಾಮರ್ಥ್ಯ ಸುಬ್ಬಮ್ಮನವರದು. ತಮ್ಮಯ್ಯನವರ ಪೆಚ್ಚು ಮೋರೆ ಹಾಗಿರಲಿ, ಉಳಿದೆಲ್ಲರೂ ಪೆಚ್ಚು ಮೋರೆ ಹಾಕಿ ಹಿಂತಿರುಗುವಷ್ಟು ನಿರರ್ಗಳವಾಗಿತ್ತು ಆಕೆಯ ವಿಚಾರ ಲಹರಿ !

ತಾನು ಗಂಡಸು ಎಂಬ ವಿಷಯದ ಮೇಲೆ ಮನಸ್ಸು ಸುಳಿದಾಗಲೆಲ್ಲ ತಮ್ಮಯ್ಯನವರಿಗೆ ಒಂದು ರೀತಿಯ ನಾಚಿಕೆ ತಲೆಯನ್ನು ತಗ್ಗಿಸಿತು. ಎಲ್ಲಾದರೊಂದು ಕಡೆ ಊಟಕ್ಕೆ ಕುಳಿತಾಗ, ಅಲ್ಲದೆ ಇದ್ದರೆ, ಟೀ ಪಾರ್ಟಿಗಳಲ್ಲಿ ಮೂಲೆಯಲ್ಲಿ ಮರೆಯಾಗಿ ಅಲ್‌ಸೇಷಿಯನ್ ಸಂಗಡ ಇದ್ದಾಗ, ಯಾವುದಾದರೊಂದು ವಿಷಯವನ್ನು ಕುರಿತು ನಾಲ್ಕು ಮಾತುಗಳನ್ನಾಡಿ ಗಂಡು ಲೋಕದ ಗೌರವವನ್ನುಳಿಸಬೇಕೆಂದು ಅವರಿಗೆ ತೋರಿತು. ಸುಬ್ಬಮ್ಮನವರ ಸಹವಾಸದಿಂದ ತಾವು ಹಿಂದೆ ಕಲಿತಿದ್ದನ್ನೆಲ್ಲ ತಮ್ಮಯ್ಯನವರು ತೀರ ಮರೆತಿದ್ದರು. ಹೊಸದಾಗಿ ಕಲಿಯುವ ಅವಶ್ಯಕತೆಯೂ ತೋರಿಬರಲಿಲ್ಲ ; ಕಲಿಯುವ ಕಲಿತನವೂ ಕೂಡ ಕಾಡುಪಾಲಾಗಿ ಹೋಗಿತ್ತು.

ಅಲ್‌ಸೇಷಿಯನ್ ನಾಯಿಗಳ ಕುಲ, ಗೋತ್ರ, ತೂಕ, ಆಯುಃಪರಿಮಾಣ, ಅಂಗಾಂಗ ವಿಶೇಷ, ಆರೋಗ್ಯ ವಿಚಾರ, ಇವುಗಳನ್ನು ತಿಳಿದು ತನ್ನ ಸತಿಗಾಗಿ ನಡೆಯುವ ಸತ್ಕಾರಕೂಟಗಳಲ್ಲಿ ವಿವರಣೆ ಮಾಡುವುದೆಂದು ನಿರ್ಧರಿಸಿದರು. ಆದರೆ, ರಂಗಿಯ ಮುಂದೆ ಶಿಂಗನೇ? ಒಂದು ದಿನ ಯಾರೋ ಕೇಳಿದ ಪ್ರಶ್ನೆಗೆ ಸುಬ್ಬಮ್ಮನವರು ತಮ್ಮ ನಾಯಿಯ ವಿಷಯವಾಗಿ ಕೊಟ್ಟ ವಿವರಣೆಯನ್ನು ನೋಡಿ ತಮ್ಮಯ್ಯನವರು ಚಕಿತರಾದರು. ಶ್ವಾನಶಾಸ್ತ್ರವನ್ನು ಕೈಬಿಟ್ಟರು. ಇಸ್ಪೀಟಿನ ವಿಷಯವೇ ಒಳ್ಳೆಯದು, ತಮ್ಮ ಪಾಂಡಿತ್ಯ ಪ್ರಕಟನೆಗೆ – ಎಂದು ಅವರು ತೀರ್ಮಾನಿಸಿದರು.

ಎರಡು ಬಣ್ಣ, ನಾಲ್ಕು ಗುಂಪು, ಇಸ್ಪೀಟಿನ ಆಸ್ಥಾನ, ಅಲ್ಲಿಯ ಅಧಿಕಾರ ವರ್ಗ, ವಿವಿಧ ಕಾರ್ಡುಗಳ ವಿವಿಧ ಅಂತಸ್ತು–ಇವುಗಳನ್ನೆಲ್ಲ ತಿಳಿದುಕೊಂಡರು. ಉರು ಹೊಡೆದರು. ಬರೆದಿಟ್ಟುಕೊಂಡರು. ನೂರಾರು ಸಲ ಓದಿ ತಮಗೆ ತಾವೇ ಹೇಳಿ ಬಲಪಡಿಸಿಕೊಂಡರು.

ಒಂದು ದಿನ ಕಂಟ್ರಾಕ್ಟರ್ ಶಿವಲಿಂಗಪ್ಪನವರು ದೊಡ್ಡ ಅಧಿಕಾರಿಗಳೊಬ್ಬರಿಗೆ ಕೊಟ್ಟ ಟೀ ಪಾರ್ಟಿಗೆ ಸುಬ್ಬಮ್ಮನವರನ್ನೂ, ಯಥಾಪ್ರಕಾರ ತಮ್ಮಯ್ಯನವರನ್ನೂ (ಅಲ್‌ಸೇಷಿಯನ್ನನ್ನೂ) ಆಹ್ವಾನಿಸಿದರು. ದೊಡ್ಡ ಅಧಿಕಾರಿಗಳೂ ಸುಬ್ಬಮ್ಮನವರೂ ಒಂದೇ ಮೇಜಿನ ಎರಡು ಪಕ್ಕಗಳಲ್ಲೂ ಕುಳಿತು ಟೀ ಎಂಬ ನೆವದಲ್ಲಿ ಚರ್ಚೆಗೆ ತೊಡಗಿದ್ದರು. ಮೊದಮೊದಲು ತಮ್ಮಯ್ಯನವರಿಗೆ ಅವರ ಚರ್ಚೆಯ ವಿಷಯವೇನೆಂದು ತಿಳಿಯಲಿಲ್ಲ. ಆದರೆ ಬರಬರುತ್ತಾ ಸುಬ್ಬಮ್ಮನವರ ಧ್ವನಿ ಆವೇಶಪೂರಿತವಾಯಿತು. ಅಧಿಕಾರಿಗಳಿಗೂ ಅಸಮಾಧಾನವಾಗಿ ಅವರ ಗಂಟಲೂ ಕೂಡ ಚೂಪಾಯಿತು. ಅವರಿಬ್ಬರೂ ಉಳಿದ ಅತಿಥಿಗಳ ಇರವನ್ನೇ

ಮರೆತಂತೆ ತೋರಿತು. ಶಿವಲಿಂಗಪ್ಪನವರೂ ಬಡಿಸುವ ಮಾಣಿಗಳೂ ಕಕ್ಕಾಬಿಕ್ಕಿಯಾಗಿ ಕೈಕೈ ಹಿಸುಕಿದರು. ಮಂತ್ರಿಗಳ ಅಧಿಕಾರ ವಿಷಯವಾಗಿಯೇ ಚರ್ಚೆ ಎಂದು ಗೊತ್ತಾದಾಗ ತಮ್ಮಯ್ಯನವರು ಥಟಕ್ಕನೆ ಎದ್ದರು. ಅಲ್‌ಸೇಷಿಯನ್ನಿಗೂ ಆಶ್ಚರ್ಯವಾಯಿತು. ಅದರ ಬಾಲ ನೆಟ್ಟಗೆ ನಿಂತಿತು. ತಮ್ಮಯ್ಯನವರು ಗಂಡು ಲೋಕವನ್ನು ಉದ್ಧರಿಸಲು ತೀರ್ಮಾನಿಸಿದರು. ಹತ್ತು ಹೆಜ್ಜೆ ಮುಂದಕ್ಕೆ ಹಾಕಿದರು. ಅಲ್‌ಸೇಷಿಯನ್ನಿಗೂ ಕೂಡ ಒಂದು ಹೊಸ ಕನಸು ಕಾಣಿಸಿತು. "ನನ್ನನ್ನ ಕೇಳಿ ಸಾರ್! ನಾನು ಹೇಳುತ್ತೇನೆ. ....ಅವಳಿಗೇನು ಗೊತ್ತು! ಇಸ್ಪೀಟಿನಲ್ಲಿ ಹೇಗೆ ಅಂತೀರೋ; ಮಂತ್ರಿಗಳಿಗೆ ಅಧಿಕಾರ ಇಸ್ಪೀಟಿನಲ್ಲಿ..." ಅಂತ ಗಟ್ಟಿಯಾಗಿ ಕೂಗಿಕೊಂಡು, ಸುಬ್ಬಮ್ಮನವರ ಪಕ್ಕದಲ್ಲಿದ್ದ ಖಾಲಿ ಕುರ್ಚಿಯಲ್ಲಿ ಕುಳಿತರು.

ಸುಬ್ಬಮ್ಮನವರು ಮೂರ್ಛೆ ಹೋದರು! ಟೀಪಾರ್ಟಿ ಅಲ್ಲಿಗೇ ಮುಕ್ತಾಯವಾಯಿತು. ಅಲ್‌ಸೇಷಿಯನ್ ನಾಯಿ ಇದ್ದಕ್ಕಿದ್ದ ಹಾಗೆ ಹಲ್ಲು ತೋರಿಸಿ ಹಾರಾಡಿದ್ದರಿಂದ ನೆರೆದಿದ್ದ ಅತಿಥಿಗಳೆಲ್ಲರೂ ಗೋಡೆ ಹಾರಿ ಪರಾರಿಯಾದರು....

ಈಗ ಸುಬ್ಬಮ್ಮನವರನ್ನ ಯಾರೂ ಸತ್ಕಾರ ಸಮಾರಂಭಗಳಿಗೆ ಕರೆಯುತ್ತಾ ಇಲ್ಲ. ದಂಪತಿಗಳಿಬ್ಬರೂ ಊರ ಅಂಚಿನಲ್ಲಿ ಒಂದು ಮನೆ ತೆಗೆದುಕೊಂಡು ಅಲ್ಲೇ ಇದಾರೆ. ಒಬ್ಬರಿಗೊಬ್ಬರು ಮಾತು ಕಥೆ ಇಲ್ಲವಂತೆ. ಅಲ್‌ಸೇಷಿಯನ್ ನಾಯಿಯೂ ಕಂಗೆಟ್ಟು ಕೊರಗುತ್ತಿದೆ.

---

# "ಹಿಂದಿನ ಕಾಲದ ಹೊನ್ನ ಮಾತುಗಳು"

" ಮನೆಗೆ ಕಾರ್ ಕಳಿಸ್ತೀನಿ, ಎಲ್ಲರೂ ಬನ್ನಿ "
" ಶಂಕರಪ್ಪಂಗೆ ಇನ್ನೊಂದಿಷ್ಟು ಕೀರು ಹಾಕಯ್ಯಾ "
" ಬಟ್ಟೆ ನೋಡೋಣ ಬಾರೋ, ಒಂದು ಸೂಟು ಹೊಲಿಸಬೇಕು ಹಬ್ಬಕ್ಕೆ "
" ಕೊನೇ ಕಂಪಾರ್ಟಮೆಂಟಲ್ಲಿ ಬೇಕಾದ ಹಾಗೆ ಜಾಗ ಇದೇರಿ "
" ನಾಲ್ಕೇ ವೀಸೆ ಸಕ್ಕರೆ ಸಾಕೇ ರಾಯರೇ "
" ಪರವಾಗಿಲ್ಲ ಇಟ್ಟುಕೊಳ್ಳೋ ಕಡ್ಡಿ ಪೆಟ್ಟಿಗೇನ "
" ಟೆಷ್ಯೂ ಸೀರೆ ಹೊಸ ರಖಂ ತೋರಿಸೊ ಅಮ್ಮಾವ್ರಗೆ "
" ಒಲೆ ಬೇಗ ಹತ್ತದೇ ಇದ್ರೆ; ಸ್ವಲ್ಪ ಸೀಮೆಯೆಣ್ಣೆ ಹಾಕಬಾರ್ದೇ "
" ಕ್ರಿಸ್‌ಮಸ್ ಹಬ್ಬಕ್ಕೆ ಬೊಂಬಾಯಿಗೆ ಹೋಗೋಣ ಬರ್ತೀಯಾ "
" ಅಂಗಡಿ ದೂರ, ಕಾರು ತೆಗೆದುಕೊಂಡು ಹೋಗಿ "
ಕಡ್ಡಿ ಪೆಟ್ಟಿಗೆ ಕೊಂಡುಕೊಂಡು ಬಾ "

—ಬಿ. ಚಂ.

# ನವೀನ ಗಾದೆಗಳು

## ಧಾತ್ರೀ ಹವನದ್ದು

ಸಾಮೂಹಿಕ ಗೀತಾ ವಾಕ್ಯ—ಊಟವಾದ ಮೇಲೆ
ಉದ್ಧರೇತ್ ಆತ್ಮನಾತ್ಮಾನಂ—

* * *

ಅಪ್ಪಣ್ಣನ ಜತೇಲಿ ಕೂತರೇನು?, ಅಮ್ಮಣ್ಣನ ಜತೇಲಿ ಕೂತರೇನು?
ಅಡಿಗೆಯವ ನಮ್ಮವನಾಗಿರುವಾಗ

* * *

ಎಲೆ ಎತ್ತೊ ಗುಂಡ ಅಂದರೆ
ಎಲೆಡಿಕೆ ಹಾಕ್ಕೊಂಡು ಬಂದೆ ಅನ್ನಬಹುದೇ?

* * *

ಶಿವಪೂಜೆಯಲ್ಲಿ ಕರಡಿ ಬಿಟ್ಟಿದ್ದಕ್ಕಿಂತ
ಧಾತ್ರಿ ಹವನದಲ್ಲಿ ಗರಡಿಯವನನ್ನು ಬಿಟ್ಟರೆ ಹೆಚ್ಚು ಗೊಂದಲ.

* * *

ಅಶನಕ್ಕೆಂದು ಬಂದ ಬ್ರಾಹ್ಮಣ
ಕಿಶೆ ತುಂಬಿಕೊಂಡು ಹೋಗಬಹುದೇ?

* * *

ದಕ್ಷಿಣೆ ಹೊತ್ತಿನಲ್ಲಿ ದಯ ದಾಕ್ಷಿಣ್ಯ ವರ್ಜ.

* * *

ಸಾಮೂಹಿಕ ಸಂಗೀತ ಪಲ್ಲವಿ—ಸುರುಚಿ ರಾಗದಲ್ಲಿ
"ಶಾಂತಮು ಲೇಕ ಸೌಖ್ಯಮು ಲೇದು"

* * *

ಊಟಕ್ಕೆ ಬಂದವ ಹೊಟ್ಟೆ ತುಂಬ ಉಂಡ
ಅಡಿಗೆ ಮಾಡಿದವ ಬರೀ ಮಜ್ಜಿಗೆ ಕುಡಿದ

* * *

ಶಾಲಿಗೆ ತಕ್ಕ ಶಾಲ್ಯಾನ್ನ
ಒಡಪಿಗೆ ತಕ್ಕ ಬಡಿಸಾಟ

* * *

ಕಡೆಯ ಸಾಲಿನಲ್ಲಿ ಕುಳಿತವರ ಗೋಳು
"ಉಣ್ಣಲಿಲ್ಲ ತಿನ್ನಲಿಲ್ಲ—ಮಜ್ಜಿಗೆ ಬಂದೇ ಬಿಡ್ತು!"

---

# ದುರ್ದೈವ ಮಹಾ!

ಶಾಮಾ ಜೋಯಿಸರೂ ನನ್ನ ತಂದೆಯೂ ಮಂಗಳವಾರ ಬೆಳಗ್ಗೆ ಸುಮಾರು ನಾಲ್ಕು ಗಂಟೆಗಳ ಕಾಲ ಎರಡು ಜಾತಕಗಳನ್ನೂ ಸರಿದೂಗಿಸುತ್ತಾ ಕುಳಿತಿದ್ದರು. ನನ್ನ ಮತ್ತು ಕಲ್ಯಾಣಿಯ ಸಂಸಾರ ಜೀವನ ಹೇಗೆ ಸಾಗಬಹುದೆಂದು ಅವರು ಗ್ರಹಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಶಾಮಾಜೋಯಿಸರೆಂದರೆ ನಮ್ಮ ಊರಲ್ಲಿ ಪ್ರಖ್ಯಾತಿ ; ಅಪಖ್ಯಾತಿ ಅಂತ ಹೇಳಿದರೂ ಹೇಳಬಹುದು. ಕೆಟ್ಟದ್ದನ್ನೇ ನುಡಿಯುವ ಜೋಯಿಸರು ಕೆಲವರುಂಟು. ಭೂಕಂಪ, ಬಿರುಗಾಳಿ, ಪ್ರವಾಹ, ಗಾಂಧಿಯವರನ್ನು ಸೆರೆಮನೆಗೆ ಕರೆದುಕೊಂಡು ಹೋಗುವುದು, ಇಂಥದ್ದನ್ನೇ ಅವರು ಪತ್ತೆ ಹಚ್ಚುತ್ತಾರೆ. ಶಾಮಾ ಜೋಯಿಸರು ಈ ಗುಂಪಿಗೆ ಸೇರಿದವರು. ಒಳ್ಳೆಯದಾಗುತ್ತೆ ಅಂತ ಅವರು ಹೇಳಿದರೆ ಅದು ಒಂದು ವೇಳೆ ನಡೆಯದೆ ಇರಬಹುದು. ಆದರೆ, ಕೆಡಕು ನುಡಿದರೆ ಮಾತ್ರ ಫಲಿಸಿಯೇ ಫಲಿಸುತ್ತದೆ. ಯಾರಾದರೂ ಖಾಯಿಲೆ ಮಲಗಿದ್ದರೆ, ಶಾಮಾ ಜೋಯಿಸರು ಜಾತಕ ನೋಡಿ "ನಾಳೆ ಮಧ್ಯಾಹ್ನ ಕಳೆಯಲಿ" ಅಂದರೆ ಸಾಕು, ಆಗಿನಿಂದಲೇ ಅಪರಕರ್ಮಕ್ಕೆ ಏರ್ಪಾಟು ಮಾಡಿಬಿಡಬಹುದು.

ಅಂತ್ಯಕಾಲದ ಡಾಕ್ಟರು ಅಂತ ಒಬ್ಬರಿದ್ದರು ನಮ್ಮ ಊರ ಹತ್ತಿರ. ಪಾಪ, ಬೇಕಾದಷ್ಟು ಓದಿದ್ದರು, ಪ್ಯಾಸಾಗಿದ್ದರು. ಆದರೆ ಹಸ್ತಗುಣ ಸುತರಾಂ ಇರಲಿಲ್ಲ. ಮೊದಲನೆಯ ಗುಟುಕು ಔಷಧಿಗೇನೇ ಆಸಾಮಿ ಛಟ್! ಒಂದುವೇಳೆ, ಆಯುಸ್ಸು ಗಟ್ಟಿಯಾಗಿದ್ದರೆ, ಎರಡನೆಯ ಗುಟುಕಿನವರೆಗೂ ಎಳೆಯಬಹುದು. ಆದರೆ, ನಿಮ್ಮೂರಿಗೆ ಬಂದಾಗ ಮಾತ್ರ ಆ ವೈದ್ಯರ ಜಂಬವೋ ಜಂಬ. ತಾವು ಮಾಡಿದ ಅನೇಕ ಜಯಪ್ರದ ಚಿಕಿತ್ಸೆಗಳನ್ನು ಬಾಯಿ ಚಪ್ಪರಿಸಿಕೊಂಡು ವಿವರಣೆ ಮಾಡುತ್ತಾರೆ. "ಒಬ್ಬ ಹುಡುಗ ಇದ್ದ, ಸಾರ್," ಅಂತ ಪ್ರಾರಂಭ ಪುರಾಣಕ್ಕೆ. "ಮೊಳಕಾಲಿನ ಮೇಲೆ ಮೊಳದುದ್ದ ಕುರು ಎದ್ದು ಮದರಾಸೆಲ್ಲಾ ಅಲೆದು 'ಕುಯ್ದು ಹಾಕಿಬಿಡುತ್ತೇನೆ' ಅಂತ ಯಾರೋ ಹೆದರಿಸಿದಾಗ ಎತ್ತಿಕೊಂಡು ಬಂದರು, ಸಾರ್, ನಮ್ಮ ಮನೆ ಜಗುಲಿಯ ಮೇಲಕ್ಕೆ. ಹಸುರು ಸೊಪ್ಪಿನ ರಸ, ಸಾರ್! ಇಲ್ಲಿ ಕೇಳಿ, ಹಸುರುಸೊಪ್ಪಿನ ರಸ ಹಿಂಡಿದೆ ಹತ್ತು ದಿವಸ..ಹುಡುಗ ಈಗ ಅವನ ಸ್ಕೂಲ್ ಫುಟ್‌ಬಾಲ್ ಟೀಮಿನಲ್ಲಿ 'ಫುಲ್ ಬ್ಯಾಕು' ಅಂತಾರೆ. ಇಲ್ಲದಿದ್ದರೆ, "ಸಾರ್! ನಾಗರಾಜರಾಯನ ಎರಡನೇ ಹೆಂಡತಿ ಗೊತ್ತೆ ತಮಗೆ?" ಅಂತಾರೆ! "ಹೇಗಿದ್ದಳು, ಪಾಪ! ಏಳು ವರ್ಷದಿಂದ ಕ್ಷಯ. ಕೆಮ್ಮಿದರೆ ಒಂದು ಅರಿಕ್ಕುಂಚಟ್ಟೆ ರಕ್ತ! ಮದನಪಳ್ಳಿ, ಮದರಾಸು, ಎಲ್ಲಾ ಮುಗಿಯಿತು. ಹೊತ್ಕೊಂಡು ಬಂದರು ನಮ್ಮ ಜಗುಲಿ ಮೇಲಕ್ಕೆ. ಮೂರು ವಾರ, ಸಾರ್! ಇಲ್ಲಿ ಕೇಳಿ! ಮೂರು ವಾರ, ಒಂದು ಔಷಧಿ ಕೊಟ್ಟೆ, ಈಗ ನಾಗರಾಜರಾಯನಿಗೆ ನಾಲ್ಕು ಮಕ್ಕಳು, ಮೊನ್ನೆ ತಿರುಪತಿ ಬೆಟ್ಟಾನ ತೊಟ್ಟಿಲಿಲ್ಲದೆ ತಾನೇ ಹತ್ತಿ ಇಳಿದಿದ್ದಾಳೆ, ಕಂಕುಳಲ್ಲಿ ಗುಂಡುಕಲ್ಲಿನ ಹಾಗೆ ಒಂದು ಕೂಸು ಬೇರೆ!" ಅಂತಾರೆ. "ಒಂದು ಪುಡಿ ಇದೆ ಸಾರ್ ನನ್ನ ಹತ್ತಿರ, ಗುಲುಗಂಜಿ ತೂಕಕ್ಕೆ ೧೨೦ ರೂಪಾಯಿ ಬರೀ ಖರ್ಚು

ಮಾತ್ರ ಅಷ್ಟಾಗುತ್ತೆ. ಕಿವಿಯಲ್ಲಿ ನಾರಾಯಣ ಅನ್ನುವಾಗ ಅದನ್ನ ಬಾಯೊಳಗೆ ಹಾಕಿ ನೋಡಿ! ಆಸಾಮಿ ಎದ್ದು ಕೂತುಕೊಳ್ಳುತ್ತಾನೆ. ಆಗ ಇನ್ನೊಂದಿಷ್ಟು ಹಾಕಿ ಬಾಯಿಗೆ! ಕೆಳಕ್ಕಿಳಿದು ಬೀದಿಯುದ್ದಕ್ಕೂ ಕುರಿಮರಿಯ ಹಾಗೆ ಕುಣಿ ಕುಣಿಯುತ್ತಾ ಚಿಮ್ಮುತ್ತಾನೆ" ಅಂತ, ಬಿಡುತ್ತಾರೆ, ನೀವು ಕೇಳುತ್ತಾ ಕುಳಿತಿರುವವರೆಗೆ !

ಶಾಮಾ ಜೋಯಿಸರೂ ಈ ಅಂತ್ಯಕಾಲ ವೈದ್ಯರ ಹಾಗೆಯೇ. "ಬಾಯಿ ಕೋಲಾಹಲ. ಕೈ ಹಾಲಾಹಲ" ಅಂತಾರಲ್ಲ ಹಾಗೆ. ಅವರೂ ಇಂಥಾ ಜಂಭೋಪಸಿಷತ್ತನ್ನೇ ನೆಚ್ಚಿಕೊಂಡು ಕಾಲ ತಳ್ಳುತ್ತಾರೆ. ಮೈಲಾಪೂರ್ ಲಾಯರುಗಳು, ಕಂಟೋನ್‌ಮೆಂಟ್ ಕಂಟ್ರಾಕ್ಟರುಗಳು, ಪಬ್ಲಿಕ್ ಆಫೀಸ್ ಪ್ರಭೃತಿಗಳು-ಎಲ್ಲರೂ ಅವರಿಗೆ ಜಾತಕ ತೋರಿಸಿದಾರಂತೆ. ಡೆಪ್ಟಿ ಕಮೀಷನರುಗಳ ವರ್ಗಾವರ್ಗಿ, ಗಲ್ತಾ ಬಡ್ತಿ, ಎಲ್ಲವೂ ಅವರಿಗೆ ಮೊದಲೇ ಜಾತಕಗಳ ಮೂಲಕ ವೇದ್ಯವಾಗಿರುತ್ತವಂತೆ. ರಾವು ಸಾಹೇಬ್....ರವರು ಈಗಿನ ಹೊಸ ಹುದ್ದೆಗೆ ಬಂದೇ ಬರುವರೆಂದು ಜೋಯಿಸರು ೬ ತಿಂಗಳ ಹಿಂದೆಯೇ ಅವರಿಗೆ ಹೇಳಿದ್ದರಂತೆ. ಆರ್ಡರ್ ಬಂದ ದಿನವೇ ಅವರು ಇವರನ್ನು ಕರೆಸಿ ೫೦೦ ರೂಪಾಯಿಗೆ ಒಂದು ಚೆಕ್ಕು ಬರೆದುಕೊಟ್ಟರಂತೆ, ದಂಪತಿಗಳಿಬ್ಬರೂ ಜೋಯಿಸರಿಗೆ ನಮಸ್ಕಾರ ಹಾಕಿದರಂತೆ. ಇಷ್ಟೆಲ್ಲಾ ನಮ್ಮೊಂದಿಗೆ ಸರಸವಾಗಿ ಸ್ನೇಹವಾಗಿ ಹೇಳಿದ ಕೂಡಲೆ ಜೋಯಿಸರು, "ನಶ್ಯಕ್ಕೆ ೩ ಕಾಸಿಲ್ಲ; ಕೊಟ್ಟಿರುತ್ತೀರ" ಅಂದಾಗ ನಮಗೆ ಅವರ ಜ್ಯೋತಿಷ್ಯದ ನಿಜಸ್ಥಿತಿ ಗೊತ್ತಾಗುವುದು.

ಶಾಮಾ ಜೋಯಿಸರು ನನ್ನ ವಿಷಯವಾಗಿಯೂ ಶುಭ ಭವಿಷ್ಯವನ್ನು ನುಡಿದಿದ್ದರು. ನಾನು ಹೈಕೋರ್ಟಿನ ಜಡ್ಜಿಯಾಗುವೆ, ತಪ್ಪಿದರೆ, ಮಂತ್ರಿಪದವಿಗೇರುವೆ, ಎಂದು ಅವರು ಹೇಳಿದ್ದರಂತೆ. ಆದರೆ, ಇನ್ನೂ ನಾನು ಲಾಯರಿಯಾಗಿಯೇ ಉಳಿದಿದೇನೆ. "ಮತ್ತೊಂದು ಸಾರಿ ಈಕಡೆ ಬಂದಾಗ ಕೊಡುತ್ತೇನೆ ಮೂರು ರೂಪಾಯಿ" ಎಂಬ ಕಕ್ಷಿಗಾರನ ಮಾತನ್ನೇ ನಂಬಿಕೊಂಡು ಸಾಲ ಜೀವನ ನಡೆಸುತ್ತಿರುವ ಬಡ ಲಾಯರಿ ! ಅಂತು ನಾನು ಮಂತ್ರಿ ಪದವಿ ಆಸೆಯನ್ನು ಮಾತ್ರ ಬಿಟ್ಟಿಲ್ಲ. ಯಾಕೆ ಬಿಡಬೇಕು ? ನಾಳೆ ಯಾವುದಾದರೂ ಹೊಸ ರಾಜ್ಯಾಂಗ ಸುಧಾರಣೆಗಳು ಜಾರಿಗೆ ಬಂದು ದೆಶೆ ಖುಲಾಯಿಸಿದರೆ.... ಹಣೆ ಬರಹವನ್ನು ಶಾಮಾ ಜೋಯಿಸರು ಬಲ್ಲರೇ ಹೊರತು, ನಾವೇನು ಬಲ್ಲೆವು-ಎಂದು ಒಂದೊಂದು ವೇಳೆ ಅನ್ನಿಸುತ್ತದೆ!

ಆಗ ನನಗೆ ಜ್ಯೋತಿಷ್ಯವೇ ತಿಳಿಯದು. ಜಗುಲಿ ಮೇಲೆ ತಂದೆಯವರೂ ಜೋಯಿಸರೂ ಕುಳಿತು ನಡೆಸಿದ ಚರ್ಚೆಯಿಂದ ನನಗೆ ಇಷ್ಟು ಮಾತ್ರ ತಿಳಿಯಿತು; ಅಂಗಾರಕನ ಚಲನವಲನಗಳ ವಿಷಯದಲ್ಲಿ ಅವರಿಗೆ ಕಳವಳವಾಗಿದೆ, ಅಂತ ಅಂಗಾರಕನಿಂದ ಜೋಯಿಸರಿಗೆ ಮಾತ್ರ ಅಲ್ಲ, ದಂಪತಿಗಳಿಗೂ ತೊಂದರೆ ಅಂತೆ. ನನ್ನ ಜಾತಕದಲ್ಲಿ ಅಂಗಾರಕ ಕುಳಿತಿದ್ದು ಒಂದು ಕಡೆ; ಕಲ್ಯಾಣಿ ಜಾತಕದಲ್ಲಿ ಬೇರೊಂದು ಕಡೆ. ಆದರೆ "ಚಂದ್ರನಿಂದ ನೋಡಿದರೆ ಅಂಗಾರಕ ಕುಳಿತಿದ್ದ ಕಡೆ ಪ್ರಶಸ್ತವಾಗಿದೆ, ಚಂದ್ರನಿಂದಲೇ ಲೆಕ್ಕ ಹಾಕಬೇಕಾದದ್ದು''—ಎಂದು ಶಾಮಾ

ಜೋಯಿಸರು ಸಾಧಿಸಿದರು. ಅಲ್ಲದೆ, ಮತ್ತೊಂದು ಕಡೆಯಿಂದ ಗುರು ಬೇರೆ ಅಂಗಾರಕನ ಮೇಲೆ ಒಂದು ಕಣ್ಣಿಟ್ಟಿದ್ದನಂತೆ. ಆದ್ದರಿಂದ 'ಮೇಷ್ಟರಿಗೆ ಹೆದರದ ಮಾನಿಟರ್' ಹಾಗೆ ಅಂಗಾರಕ ಅಲ್ಲಾಡುವುದೇ ಇಲ್ಲ ಅಂತ ಅವರು ತೀರ್ಪು ಕೊಟ್ಟರು. ನನ್ನ ತಂದೆಗೆ ಸಮಾಧಾನವಾಯಿತು. ನಿಶ್ಚಿತಾರ್ಥಕ್ಕಾಗಿ ಶುಕ್ರವಾರ ಬರುವುದಾಗಿ ರಂಗಣ್ಣನವರಿಗೆ ಪತ್ರ ಹೋಯಿತು.

ಗುರುವಾರ ಸಂಜೆ ಇತರ ವಿಷಯಗಳೆಲ್ಲವೂ ನಿಶ್ಚಯವಾದುವು. ವಜ್ರದುಂಗುರ, ಸೂಟು, ಬೂಟು, ಮದುವೆ ಖರ್ಚಿಗೆ ೬೦೦ ರೂಪಾಯಿ, ೧೫೦೦ ರೂಪಾಯಿ ಅನಾಮತ್ತಾಗಿ ವರದಕ್ಷಿಣೆ; ೪೦೦ ರೂಪಾಯಿಗೆ ಬೆಳ್ಳಿ ಪಾತ್ರೆ. ಅಲ್ಲದೆ, ನನ್ನನ್ನ ಮುಂದಕ್ಕೆ ಓದಿಸುವ ಭಾರ—ನಾನು ಎಷ್ಟು ಮುಂದಕ್ಕೆ ಓದಿದರೂ—ರಂಗಣ್ಣನವರದೇ! ಐದು ದಿನ ಮದುವೆ; ವಿಜೃಂಭಣೆಯಿಂದಾಗಬೇಕು, ೪೦ ಜನವಾದರೂ ಬೀಗರು ಬರುತ್ತಾರೆ. ಕಾಫಿ ಬಹಳ ಚೆಕ್ಕಾಗಿರಬೇಕು. ತಂಟೆ ತಕರಾರು ಮಾಡಕೂಡದು—ಇತ್ಯಾದಿ, ಇತ್ಯಾದಿ.

ಶುಕ್ರವಾರ ನಿಶ್ಚಿತಾರ್ಥವಾಯಿತು. ಅವರ ಮನೆಯಿಂದ ಹೊರಡುವಾಗ ನನ್ನ ತಂದೆ "ರಂಗಣ್ಣನವರೇ! ದುಡ್ಡೇನ್ಸ ಮಹಾ! ದುಡ್ಡಿನ ವಿಷಯದಲ್ಲಿ ನನಗೆ ಕೊಂಚವೂ ಆಸೆಯೇ ಇಲ್ಲ. ಮುಖ್ಯವಾಗಿ ನಮ್ಮ ಮಕ್ಕಳು ಸುಖವಾಗಿ ಬಾಳಿ ಬದುಕಬೇಕು, ಅಷ್ಟೆ" ಅಂದರು.

"ಹೌದು, ಹೌದು. ಅವರು ಸುಖವಾಗಿರುವುದಕ್ಕಾಗಿಯೇ ನಾನು ಇಷ್ಟೊಂದು ಹಣ ವೆಚ್ಚ ಮಾಡುವುದು" ಎಂದು ಪೆಚ್ಚು ಮೋರೆ ಹಾಕುತ್ತಾ ನುಡಿದರು. ಮನೆಗೆ ಬಂದಾಗ, ಶಾಮಾಜೋಯಿಸರು, ನನ್ನ ತಂದೆಯನ್ನು ಬೈದರು. "ನೋಡು ನೀನು ಕೊಂಚ ಆತುರಪಟ್ಟುಬಿಟ್ಟೆ! ಇನ್ನೂ ಸ್ವಲ್ಪ ಬಿಗಿ ಹಿಡಿದಿದ್ದರೆ, ಎರಡು ಸಾವಿರ, ಎರಡು ಸಾವಿರ, ಎಣಿಸಿಬಿಟ್ಟರುವೆನು, ಮಹಾರಾಯ" ಅಂದರು.

ಸೋಮವಾರ ನನ್ನ ತಾಯಿ ನನ್ನ ರೂಮಿನೊಳಕ್ಕೆ ಬಂದು, "ಏನೋ! ಎಲ್ಲಾ ಸರಿಹೋಯ್ತೇನೋ?" ಅಂದರು. ನಾನು ಲಜ್ಜೆಯಿಂದ ತಲೆತಗ್ಗಿಸುತ್ತಾ, "ಅಮ್ಮಾ! ಪರೀಕ್ಷೆ ಮುಗಿದ ಮೇಲೆ ಮದುವೆ ಆದರೆ ಸಾಲದೆ?" ಅಂದೆ. "ಹೂಂ. ಮೂವತ್ತು ವರ್ಷ ಮುದುಕನಾದಮೇಲೆ ಸಂಸಾರ ಪ್ರಾರಂಭಿಸು" ಅಂತ ಹೇಳಿದರು. ನಾನು ಮಾತನಾಡಲಿಲ್ಲ.—"ಮೌನಂ ಸಮ್ಮತಿ ಲಕ್ಷಣಂ." ನಿಜ, ಅನ್ನಿ.

ಮಂಗಳವಾರ ಬೆಂಗಳೂರಿಗೆ ಹೊರಟೆ, ವಿಶು ಕಾದಿದ್ದ ನನಗಾಗಿ. "ಏನೋ, ಕೆಪ್ಪ!?" ಅಂದ. "ತೀರ್ಮಾನವಾಯಿತು" ಅಂದೆ. ಮುಷ್ಟಿಯನ್ನು ಬಿಗಿದು ನನ್ನ ಬೆನ್ನ ಮೇಲೆ ಮೂರು ನಾಲ್ಕು ಸಲ ಬಾರಿಸಿದ. "ಮದುವೆಯೇನೋ ನಿನಗೆ? ಮಾಡಿಕೊಳ್ಳುತ್ತೀಯೇನೋ ಮಡಯಾ!" ಎಂದು ನನ್ನನ್ನು ಮೂಲೆ ಮೂಲೆಗೂ ನೂಕಿದ.

ಜೂನ್ ಮೂರನೆಯ ತಾರೀಖು ನನ್ನ ಮದುವೆ.

**ಮುಂದಿನ ತಿಂಗಳು: "ಕಲ್ಯಾಣಿ ಇವಳೇನ ಬಹುದೇ?"**

**—ಎಸ್. ವಿ. ವೀ. ಕೃಷ್ಣ.**

# THE MYSORE GLASS & ENAMEL WORKS, LTD.

**34, GANDHI NAGAR - BANGALORE CITY.**

---

# HONEY & JAM JARS

**1 lb. & ½ lb. capacity**

**Wide threaded mouth fitted with**

**Gold lacqured Tin Tops.**

*For Prices and Terms please apply to—*

The Managing Agent.

●

## ದಿ ಮೈಸೂರು ಗ್ಲಾಸ್ ಅಂಡ್ ಎನಾಮಲ್ ವರ್ಕ್ಸ್, ಲಿ.

೩೪, ಗಾಂಧಿನಗರ - ಬೆಂಗಳೂರು ಸಿಟಿ.

---

## ಜೇನುತುಪ್ಪ ಮತ್ತು ಜಾಮ್ ಜಾಡಿಗಳು

೧ ಪೌಂಡ್ ಮತ್ತು ½ ಪೌಂಡಿನವು.

ತ್ರೆಡ್ ಹಾಕಿರುವ ಅಗಲವಾದ ಬಾಯಿಯಿದೆ.

ಬಂಗಾರದ ವರ್ಣದ ಅರಗಿನ ಬಣ್ಣ ಹಾಕಿರುವ ತಗಡಿನ ಬಿರಟೆಗಳಿವೆ.

ಬೆಲೆ ಮತ್ತು ಷರತ್ತುಗಳಿಗೆ ದಯವಿಟ್ಟು ಬರೆದುಕೊಳ್ಳಿ—

ಮ್ಯಾನೇಜಿಂಗ್ ಏಜಂಟ್.



ನಿಷ್ಕಳಂಕ - - -
- - - ಲಾವಣ್ಯ



ಆರಿಸಿದ ಶ್ರೀಗಂಧದ ಪರಿಮಳವನ್ನು ಕೊಟ್ಟು ಇದನ್ನು ಮೃದುಮಧುರವಾಗಿ ಮಾಡಿದೆ; ಇದರ ವಿಪುಲ ನೊರೆಯು ಚರ್ಮದ ರಂಧ್ರಗಳೊಳಕ್ಕೆ ಆಳವಾಗಿ ಹೋಗಿ ಕೊಳೆಯನ್ನೆಲ್ಲಾ ತೆಗೆದುಹಾಕಿ, ಅದಕ್ಕೆ ಚೈತನ್ಯವನ್ನು ಕೊಟ್ಟು ಆರೋಗ್ಯಯುತವಾದ ವರ್ಚಸ್ಸನ್ನುಂಟು ಮಾಡುತ್ತೆ.

# ಮೈಸೂರು ಸ್ಯಾಂಡಲ್ ಸೋಪು




**ಎಲ್ಲಾ ವ್ಯಾಪಾರಿಗಳಲ್ಲೂ ದೊರೆಯುತ್ತದೆ.**

## ಗವರ್ನಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು




## ಲೋಧ್ರ—ಗರ್ಭಾಶಯ ಟಾನಿಕ್

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿಮಾಡುವುದು.

## ಅರ್ಕ—ಶ್ರೇಷ್ಠ ಜ್ವರ ನಿವಾರಿಣಿ

ಇಃಫ್ಲೂಯಂಜಾ, ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು

## ಅಮೃತ—ರಕ್ತಶುದ್ಧಿ ಟಾನಿಕ್

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿ ಮಾಂದ್ಯ, ತಲೆ ತಿರುಗುವುದು, ಚರ್ಮ ರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ,** — — **ಬೆಂಗಳೂರು ಸಿಟಿ.**

# ಉತ್ತರಾರ್ಧನಾರೀಶ್ವರ

(ಶ್ರೀಮಾನ್ ವಿ. ಸಿ. ಯವರಲ್ಲಿ ಕ್ಷಮಾಪಣೆಗಳೊಡನೆ)

**“ಷರಾಯಿ ಷರ್ಟು ಹಾಕಿದ ಸ್ತ್ರೀಯನ್ನು ನೋಡಿ”**



ಕಂಡವರು ಕಂಡಂತೆ ಚರ್ಚಿಸುವರೈ ನಿನ್ನ ।
ಗಂಡೆಂದು ಹೆಣ್ಣೆಂದು ಸಂದೇಹವೆಂದು ॥

ಎಲ್ಲ ಚರ್ಚೆಗಳ ಎಲ್ಲೆಯೇರುತ ನಿಂದೆ ।
ಎಲ್ಲ ಯುವಕರ ತನುಸೆಳೆದು ನಿಂದೆ ॥

ಕಾಲನ್ನು ಕಂಡವರು ಕಾಣುವರು ಷರಾಯ ।
ಗಂಡನ್ನೆ ನಿಯಮವನೆ ನಿಷ್ಠುರವನೆ ॥

ಶಿರವನ್ನು ಕಂಡವರು ಕಾಣುವರು ಬೈತಲೆಯ ।
ಹೆಣ್ಣನ್ನೆ - ವಿನಯವನೆ - ಬಿನ್ನಾಣವನ್ನೆ ॥

ಒಡಲನ್ನು ನೋಡುವರು ಕಾಣುವರು ತಾಯ್ತನವ ।
ಮನಹರಿಪ ಜಾಲವನು, ಕಣ್ಣಂಚ ಕೂರ್ಮೊನೆಯ ॥

ಮೊಗವನ್ನು ನೋಡುವರು ಕಾಣುವರು ಸಾಹಸವ ।
ಸಕಲರನು ಸೋಲಿಸುವ ನಯವಿನಯ ಅಧರಗಳ ॥

ನಾರಿ ಪುರುಷರು ಕೂಡ ಎಂದೆಂದೂ ಒಂದೆಂದು ।
ಸಾರಲೋಸುಗ ಬಿದಿಯು ನಿನ್ನ ಸೃಜಿಸಿದನೊ ॥

ನಾರಿಯರು ಬಲು ಮೋಸಗಾರ್ತಿಯರು ಎಂದೆಂದು ।
ಅರುಹಲೋಸುಗ ಬಿದಿಯು ಇಂತು ರಚಿಸಿದನೊ ॥



'ಮೈಸೂರು ಇನ್‌ಷೂರೆನ್ಸ್ ಕಂಪೆನಿ' ಮತ್ತು 'ಮೈಸೂರು
ಪ್ರಾವಿಡೆಂಟ್ ಇನ್‌ಷೂರೆನ್ಸ್ ಕಂಪನಿ'

ಪ್ರಧಾನ ಕಛೇರಿ—ಬೆಂಗಳೂರು ನಗರ

—ಹೊಸದಾಗಿ ತೆರೆದಿರುವ ಕಛೇರಿಗಳು—

ಒಂದು ಆರ್ಗನೈಜೇಷರ್ಸ್ ಕಛೇರಿ—

**ವಿಲ್ಸನ್ ರಸ್ತೆ, ಲಕ್ಷ್ಮೀಪುರಂ, ಕೊಲ್ಹಾಪುರ**

ಒಂದು ಉಪ ಕಛೇರಿ—

**ನಂ. ೧೪, ಮೈಕೇಲ್ ಎಂಪೋರಿಯಂ, ಬಿಗ್ ಬಜಾರ್
ಕೊಯಮುತ್ತೂರು**

● ಸಾಂಗ್ಲಿ ಮತ್ತು ಕೊಲ್ಹಾಪುರ ಸಂಸ್ಥಾನಗಳ ಸುಪ್ರಸಿದ್ಧ ನ್ಯಾಯವಾದಿಗಳು ಮತ್ತು ಉದ್ಯಮ ಸಾಧಕರಿಂದೊಡಗೂಡಿದ ಸಮರ್ಥವೂ ಪ್ರಭಾವಯುತವೂ ಆದ ಆಡಳಿತ ಸಭೆಯ ಮೇಲ್ವಿಚಾರಣೆಯನ್ನು ಆರ್ಗನೈಜೇಷರ್ಸ್ ಕಛೇರಿಯೊಂದನ್ನು ಮೇಲೆ ಕಂಡಂತೆ ಕೊಲ್ಹಾಪುರದಲ್ಲಿಯೂ, ಮತ್ತು ಉಪ ಕಛೇರಿಯೊಂದನ್ನು ಕೊಯಮುತ್ತೂರಿ (ಮದ್ರಾಸ್ ಪ್ರೆಸಿಡೆನ್ಸಿ)ನಲ್ಲಿಯೂ, ಸಹ ಪ್ರಾರಂಭಿಸಲಾಗಿದೆಯೆಂಬ ಸಂತೋಷದ ಸುದ್ದಿಯನ್ನು ಪ್ರಕಟಿಸಲು ನಾವು ಸಂತೋಷಭರಿತರಾಗಿದ್ದೇವೆ.

● ವಿಮೆಯೇ ವಿಮಾನಧಾಳಿಯ ಸಂದರ್ಭದಲ್ಲಿ ಅಭೇದ್ಯವಾದ ರಕ್ಷಣಾಸ್ಥಾನವಾಗಿದೆ. ಆದ್ದರಿಂದ ಇಂದೇ "ಮೈಸೂರು ವಿಮಾ ಸಂಸ್ಥೆ" ಗಳಲ್ಲಿ ವಿಮೆ ಮಾಡುವುದರ ಮೂಲಕ ನಿಮ್ಮ ಜನಗಳನ್ನೂ ಧನವನ್ನೂ ಸುರಕ್ಷಿತವಾಗಿ ಕಾಪಾಡಿರಿ.

**ಹೆಚ್ಚಿನ ವಿವರಗಳ ಬಗ್ಗೆ ಕೆಳಗಿನ ವಿಳಾಸಗಳಿಗೆ ಈ ದಿನವೇ ಬರೆಯಿರಿ—**

ಮೈಸೂರು ಇನ್‌ಷೂರೆನ್ಸ್ ಕಂಪನಿ ಮತ್ತು ಮೈಸೂರು
ಪ್ರಾವಿಡೆಂಟ್ ಇನ್‌ಷೂರೆನ್ಸ್ ಕಂಪನಿ

**"ಲಕ್ಷ್ಮೀಸ್ಥಾನಂ", ಲಾಲ್‌ಬಾಗ್ ಕೋಟೆ ರಸ್ತೆ, ಬೆಂಗಳೂರು ನಗರ**

ಅಥವಾ

ಬ್ರಿಟಿಷ್ ಭಾರತದ ಮುಖ್ಯ ಕಛೇರಿ

**ಕೆರವೀರ ಶೆಟ್ಟಿ ಬಿಲ್ಡಿಂಗ್ : ಜವಳಿ ಚೌಕ ಹುಬ್ಬಳ್ಳಿ**

## ಮಣ್ಯಂ ಕಂಪನಿಯವರ ತಯಾರಿಕೆಗಳು




ಮಣ್ಯಂ ಕಂಪನಿಯವರ ಸ್ನೋ, ಹೇರ್ ಆಯಿಲ್ ಮತ್ತು ಸೋಪ್ ಕರ್ನಾಟಕದಲ್ಲೆಲ್ಲ ಪ್ರಸಿದ್ಧಿ ಪಡೆದಿವೆ. ಅನೇಕ ವಸ್ತು ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಪಡೆದಿವೆ. ಸೌಂದರ್ಯೋಪಕರಣಗಳಲ್ಲಿ ಇವಕ್ಕೆ ಮಿಗಿಲೆನಿಸುವವು ಬೇರೆ ಯಾವವೂ ಇಲ್ಲ ಎನಿಸಿಕೊಂಡಿವೆ. ಒಂದು ಸಾರಿ ಪರೀಕ್ಷಿಸಿ ನೋಡಿ, ತಾನೇ ತಿಳಿಯುತ್ತೆ !!




## ಮಣ್ಯಂ ಅಂಡ್ ಕಂಪನಿ, ಮದ್ರಾಸು.

# ಕನ್ನಡ ಚಿತ್ರರಂಗಕ್ಕೆ ಸೊಬಗನ್ನು ಕಟ್ಟಿರುವ ಕನ್ನಡ ಚಿತ್ರ

**ಕರ್ನಾಟಕದ ವಿವಿಧ ಕೇಂದ್ರಗಳಲ್ಲಿ ಜಯಭೇರಿ ಹೊಡೆಯುತ್ತಾ ಅನಿರೀಕ್ಷಿತ**

**— ಜನಾದರಣೆ ಪಡೆದ ಸುಂದರ ಸಾಮಾಜಿಕ ಕನ್ನಡ ಚಿತ್ರ —**

ತಾರಾಗಣ :

ವಿನೋದರತ್ನಾಕರ

ನಾಟಕರತ್ನ

**ಜಿ. ಹೆಚ್.**

**ವೀರಣ್ಣ**

**ಕೆಂಪರಾಜ್**

**ಮರಿರಾವ್**




ತಾರಾಗಣ :

**ಶಾಂತಾ**

**ಹುಬ್ಳೀಕರ್**

ಅಭಿನಯದ ರಾಣಿ

**ಬಿ. ಜಯಮ್ಮ**

**ಮೋಹನ**

**ಕುಮಾರಿ**

**ಸುಂದರಮ್ಮ**

ಮುಂತಾದವರ ಕಲಾಪೂರಿತ ಅಭಿನಯ

●

**ಸುಮಧುರ ಗೀತಗಳು— ಸುಂದರ ದೃಶ್ಯಗಳು—ಭಾವನಾಪೂರಿತ ಅಭಿನಯ**

# ಮರೆಯದೇ ನೀವು ನೋಡಬೇಕಾದ ಚಿತ್ರ

## ಬೆಂಗಳೂರು ಸಾಗರ್ ಟಾಕೀಸ್‌ನಲ್ಲಿ

**— ಪ್ರದರ್ಶನವನ್ನು ಎದುರು ನೋಡಿ —**

| ದಿಗ್ದರ್ಶಕರು : | ಗೀತೆಗಳು : | ಕನ್ನಡ ಕಥೆ ಮತ್ತು ಸಂಭಾಷಣೆ : |
|---|---|---|
| **ವಹಾಬ್** | ಬಿ. ಪುಟ್ಟಸ್ವಾಮಯ್ಯ | ಅ. ನ. ಕೃಷ್ಣರಾವ್ |

●

**DISTRIBUTORS**

# Select Pictures Circuit

**GANDHI NAGAR : : . BANGALORE CITY**


Printed & Published by K. Jeevanna Rao at Prajamata Power Press,
Bangalore City. Editor: Dr. R. SHIVARAM.